# ರಾಘವಾಂಕನ ಹಲ್ಲು

ನಗೆಬರಹಗಳು

ಜಿ. ಪಿ. ರಾಜರತ್ನಂ

ಮುದ್ರಣ ಮತ್ತು ಪ್ರಕಾಶನ

ಶಾರದಾ ಪ್ರಕಟನಾಲಯ

ಅರಳೇಪೇಟೆ :: ಬೆಂಗಳೂರು ೨

ಪ್ರಥಮ ಮುದ್ರಣ: ಏಪ್ರಿಲ್ ೧೯೫೬

( ಎಲ್ಲಾ ಹಕ್ಕುಗಳೂ ಲೇಖಕರಿಗೆ ಸೇರಿವೆ )

ಬೆಲೆ
ಒಂದೂಕಾಲು ರೂಪಾಯಿ

ಚಂದಾ ವಿವರ
ಆರು ತಿಂಗಳಿಗೆ: ಐದೂವರೆ ರೂಪಾಯಿ
ಒಂದು ವರ್ಷಕ್ಕೆ: ಹನ್ನೊಂದು ರೂಪಾಯಿ

# ಅರಿಕೆ

ಇದು "**ರಾಘವಾಂಕನ ಹಲ್ಲು**"–ಮೂವತ್ತೆರಡು, ಮತ್ತೆ ಮೇಲೆರಡು.

ಹಲ್ಲುಗಳಲ್ಲಿ – ನಗುವ ಹಲ್ಲು, ಕಚ್ಚುವ ಹಲ್ಲು, ಕಡಿಯುವ ಹಲ್ಲು, ಅಗಿಯುವ ಹಲ್ಲು, ಅರೆಯುವ ಹಲ್ಲು, ಸುಲಿದ ಹಲ್ಲು, ಹುಳುಕು ಹಲ್ಲು ಇತ್ಯಾದಿ ಗಳಿರುವಂತೆಯೇ ಈ ಮೂವತ್ತುನಾಲ್ಕರಲ್ಲಿಯಾದರೂ.

ಈ ಹಲ್ಲುಗಳನ್ನೂ ಕೋರೆಗಳನ್ನೂ ನಾನು ಮೊದಲು ಬಿಟ್ಟದ್ದು – ಇಂಥವು ಗಳಿಗಾಗಿಯೇ ದರ್ಭೆ ಹಿಡಿದು ಕೂತ '**ಕೊರವಂಜಿ**' ಮಾಸಪತ್ರಿಕೆಯಲ್ಲಿ.

ಆಗೊಂದು ಈಗೊಂದು ಎಂಬಂತೆ ಹಳೆಯ ಸಂಚಿಕೆಗಳಲ್ಲಿ ಹರಡಿಕೊಂಡು ಹೋಗಿದ್ದ ಚೆಕ್ಕೆಚೂರುಗಳನ್ನೆಲ್ಲ ಒಟ್ಟುಗೂಡಿಸುವ ಹಠವನ್ನೆತ್ತಿ ಹಿಡಿದು, ಕಡೆಗೂ ಇದನ್ನು ತಮ್ಮ ಪ್ರಕಟನೆಯಾಗಿ ಮಾಡಿಕೊಂಡವರು – ಶಾರದಾ ಪ್ರಕಟನಾಲಯದ ಶ್ರೀ ಜಿ ಬಸವರಾಜ್ ಮತ್ತು ಶ್ರೀ ಆರ್. ಬಸವರಾಜ್ ಮಿತ್ರರಿಬ್ಬರು.

ಇನ್ನು, ಇದನ್ನು ಓದಬೇಕಾಗಿರುವವರು – ನನ್ನ ವಾಚಕ ವಿಶ್ವಾಸಿಗಳಾದ ತಾವು. ತಮ್ಮಲ್ಲಿ ಒಂದು ಗುಟ್ಟು: ಇದರೊಳಗಿನ ಸಿಪ್ಪೆ, ಸಿವುರು, ಚೆಕ್ಕೆ, ಚೂರುಗಳು – ಅವು ಗದ್ಯವಾಗಲಿ, ಪದ್ಯವಾಗಲಿ – ಬಹುಮಟ್ಟಿಗೆ '**ಅನ್ಯಾಪದೇಶಗಳು**'– ಎಂದರೆ, ಯಾವುದನ್ನು ಕುರಿತು ಟೀಕಿಸಬೇಕೋ ಅಂಥದನ್ನು ನೇರವಾಗಿ ನಿರ್ದೇಶಿಸದೆ, ಅನ್ಯವಾದ ಯಾವುದೋ ಒಂದನ್ನು ಟೀಕಿಸುವ ನೆಪದಲ್ಲಿ – 'ಶಾಲು ಸುತ್ತಿ ಎತ್ತುವ' ಪದ್ಧತಿಯಲ್ಲಿ ಪ್ರಯೋಗ ವಾದವು. ಉಳಿದವು ಕೆಲವು ನೇರವಾದ, ನಿರ್ವ್ಯಾಜವಾದ, ನಿರ್ವಿಕಾರವಾದ ನಗುಗಳು. ಇನ್ನೂ ಕೆಲವು ವಿಡಂಬನೆಗಳು, ಕೆಲವು ಅಣಕುವಾಡುಗಳು.

ಇದರೊಳಗೆ ಇರುವವುಗಳಲ್ಲಿ ಸುಮಾರು ಮೂರರಲ್ಲಿ ಎರಡು ಪಾಲು ನನ್ನ ಸ್ವಂತ 'ಕಪಿಕಲ್ಪಿತ.' ಇನ್ನು ಒಂದು ಪಾಲು – ಅಲ್ಲಿಂದ ಇಲ್ಲಿಂದ ಪ್ರೇರಣೆ

ಪಡೆದ ಫಲಗಳು. ಈ ಋಣದ ಒಪ್ಪಿಗೆ ಬಹುಮಟ್ಟಿಗೆ ಪದ್ಯವಿಭಾಗಕ್ಕೆ ಅನ್ವಯಿಸುತ್ತದೆ. ಈ ಭಾಗದ ಅನ್ಯಾಪದೇಶಗಳಿಗೆ ಮೂಲಪ್ರೇರಣೆ ಬಂದದ್ದು-ರಷ್ಯಾ ದೇಶದ ಕ್ರೈಲಾಫನ ಕತೆಗಳಿಂದ ಗದ್ಯಚಿತ್ರಗಳಲ್ಲಿ 'ಕ್ವಾಣನ ಕಾಳಗ' ಮತ್ತು 'ಸತ್ಯಾ ಅರೀಚ್ಚೆಂದ್ರ' ಎಂಬ ಎರಡೂ ಒಬ್ಬ ವಿದ್ಯಾರ್ಥಿಯ ಉತ್ತರ ಪತ್ರಿಕೆಯಿಂದ ಸ್ಫೂರ್ತಿ ಪಡೆದವು. ಉಳಿದವೆಲ್ಲ ನನ್ನವೇ.

ಹೀಗೆ ಯಾರು ಯಾರಿಂದ, ಯಾವ ಯಾವ ದಿಕ್ಕಿಂದ, ಏನೇನು ಗಾಳಿಯಿಂದ ಈ ಲಘುಬರಹಗಳು ರೂಪಾಗಿ, ಅಚ್ಚಾಗಿ, ಈಗ ಪುಸ್ತಕವಾಗಿ ಬಂದಿದೆಯೋ - ಅವರಿಗೆಲ್ಲ, ಅದಕ್ಕೆಲ್ಲ, ಅವುಗಳಿಗೆಲ್ಲ "ಪ್ರಣತೋಽಸ್ಮಿ ನಿತ್ಯಂ."

೧೦-೩-೫೬
ಮಲ್ಲೇಶ್ವರಂ.

ಜಿ. ಪಿ. ರಾಜರತ್ನಂ

# ವಿ ವ ರ

---

# ರಾಘವಾಂಕನ ಹಲ್ಲು

ಹನ್ನೊಂದನೆಯ ಶತಮಾನದಲ್ಲಿ ನಾಯಿಕೊಡೆಗಳಂತೆ ತಲೆಯೆತ್ತಿದ ಕ್ಷುದ್ರಾರ್ಥಪ್ರ ಕೃತಿಗಳನ್ನು ತುಳಿದು ಕಳೆಯುವುದಕ್ಕೆ ಹನ್ನೆರಡನೆಯ ಶತಮಾನದಲ್ಲಿ ಮಹಾರ್ಥಪ್ರ ಕೃತಿಗಳು ಮೇಲೆದ್ದು ಬಂದುವು ಕನ್ನಡದ ಮಹಮನೆಯನ್ನು ನೆಲಸಮ ಮಾಡುವುದಕ್ಕಾಗಿಯೇ ಹುಟ್ಟಿಕೊಂಡ ಮಹಮನೆ ಮುರುಕರು ಮಣ್ಣುಗೂಡಿದ ಮಹಾ ಶತಮಾನ ಅದು. ಸ್ವೈರಸಾಹಿತಿಗಳು ಹೇಳಹೆಸರಿಲ್ಲದ ಹಾಗೆ ಸಮಾಧಿಯಾಗಿಹೋದ ಮಹಾಸಮಯ ಅದು.

ಜಯಸೇನ, ಬ್ರಹ್ಮಶಿವ, ವೃತ್ತವಿಲಾಸ ಇವರುಗಳು ಅನ್ಯಾಪದೇಶಕ್ರಮದಿಂದ ತಮ್ಮ ಕೃತಿಗಳನ್ನು ರಚಿಸಿದ್ದು ಆಗಲಿ. ಸಾಹಿತ್ಯಕ್ಕೆ ಧರ್ಮದ ಮೆರುಗು ಬಳಿದು, ಸ್ವಮತಸ್ಥಾಪನೆ ಪರಮತಖಂಡನೆ ತೀಕ್ಷ್ಣವಿಡಂಬನೆಗಳ ರೀತಿಯಲ್ಲಿ ಮನೆಮುರುಕರ ಸಾಹಿತ್ಯವನ್ನೆಲ್ಲ ಮೂದಲಿಸಿ ಮೂಲೆಗೊತ್ತಿದ ಕಾಲ – ಹನ್ನೆರಡನೆಯ ಶತಮಾನ.

ನಾಗವರ್ಮನು ಮೇಲಿನವರಂತೆ ಮೂದಲಿಗೆ ಮೆಯ್ಯಿಕ್ಕದೆ ಹೋದರೂ, ತನ್ನ ಕಾವ್ಯಾವಲೋಕನ ಭಾಷಾಭೂಷಣಗಳಲ್ಲಿ ಕನ್ನಡ ಸಾಹಿತ್ಯಭಾಷೆಗೀಗೆ ನಿಯಮನಿಬಂಧಾವಲಿಗಳನ್ನು ನೇಮಕಮಾಡಿ ಶಾಸನವೆತ್ತಿದ ಕಾಲ – ಹನ್ನೆರಡನೆಯ ಶತಮಾನ. ಉದಯಾದಿತ್ಯನು ಕೂಡ ಇವನಂತೆಯೇ ಅನುಶಾಸನೆ ಮಾಡಿದ ಕಾಲ.

ಇವರ ಜೊತೆಗೆ ಕರ್ಣಪಾರ್ಯ, ದುರ್ಗಸಿಂಹ, ಹರಿಹರ, ರಾಘವಾಂಕ, ಪದ್ಮರಸ, ನೇಮಿಚಂದ್ರ, ರುದ್ರಭಟ್ಟ, ದೇವಕವಿ, ಅಗ್ಗಳ, ಸೋಮ, ಆಚಣ್ಣ, ಕವಿಕಾಮ, ಬಂಧುವರ್ಮ ಮೊದಲಾದವರು ಇದೇ ಶತಮಾನದಲ್ಲಿ ಸರಸ್ವತೀ ಶಿರೋಮಂಡನಗಳನ್ನು ರಚಿಸಿಕೊಟ್ಟರು

ಹೀಗೆ ಸರ್ವಮುಖಗಳಲ್ಲೂ ಸತ್ಕಾವ್ಯವು ಮುತ್ತುತ್ತಿರಲಾಗಿ, ಮಹಮನೆ ಮುರುಕರ ಮಸಣವಾದದ್ದು ಏನೂ ಆಶ್ಚರ್ಯವಲ್ಲ. ಹಾಗಾಗಿ, ಹನ್ನೆರಡನೆಯ ಶತಮಾನದಲ್ಲಿ ಅಜ್ಞಾತ ಕವಿಗಳೇ ಇಲ್ಲವಾದದ್ದು ಅವರ ದೌರ್ಭಾಗ್ಯ.

ಆದರೆ, ಮೇಲೆ ಹೇಳಿದ ವೀರಕವಿಗಳಲ್ಲಿ ಇಬ್ಬರಾದ ಹರಿಹರ ಮತ್ತು ರಾಘವಾಂಕ ಇವರ ಹೆಸರಿಗೆ ಈಗಲೂ ಅಂಟಿಕೊಂಡಿರುವ ಒಂದು ದಂತಕಥೆಗೆ ತಂದೆಯಾದವನೊಬ್ಬನು, ಒಂದು ದೃಷ್ಟಿಯಿಂದ ಹನ್ನೆರಡನೆಯ ಶತಮಾನದ ಅಜ್ಞಾತಕವಿ ಎನ್ನಿಸಿಕೊಳ್ಳಲು ಅರ್ಹತೆ ಪಡೆದಿರುವನಾದ್ದರಿಂದ, ಅವನ ವಿಷಯವನ್ನು ಇಲ್ಲಿ ಪ್ರಸ್ತಾಪಿಸಲಾಗುವುದು.

ಅವನ ಹೆಸರು ಘೇಂಡಾಕರ್ಣ "ಗುರಾರಕುಲಪುಂಗವ" ಎಂಬುದು ಇವನ ಬಿರುದು. ಇವನ ಪೂರ್ವಿಕರ ಮೂಲಪುರುಷನು ತೊಪ್ಪೆ ಹೊರುತ್ತಿದ್ದನಂತೆ. ಆದ್ದರಿಂದ ಇವನ ವಂಶಕ್ಕೆ ಗೂಥಹಾರರು ಅಥವಾ ಗೂಥಹಾರಕರು ಎಂದು ಹೆಸರಾಯಿತು. (ಈ ಗೂಥಹಾರರಿಗೂ ಚರಿತ್ರೆಯಲ್ಲಿ ಪ್ರಸಿದ್ಧರಾದ ಶಿಲಾಹಾರರಿಗೂ ಏನಾದರೂ ಸಂಬಂಧವುಂಟೋ ಇಲ್ಲವೋ ಅರಿಯೆವು.) ಈ 'ಗೂಥಹಾರ' ಎಂಬುದು ಕಾಲಕ್ರಮದಲ್ಲಿ 'ಗುರಾರ' ಎಂದಾಯಿತು. ಈ ಘೇಂಡಾಕರ್ಣನಿಗೆ ಹನ್ನೆರಡು ತಲೆಗಳ ಹಿಂದಿನ ಕಾಲದಿಂದ, ಅವರ ವಂಶದಲ್ಲಿ ಕೇವಲ ಹೆಣ್ಣುಮಕ್ಕಳು ಹುಟ್ಟುತ್ತಿದ್ದರೇ ವಿನಾ ಗಂಡುಮಕ್ಕಳು ಆಗಿರಲಿಲ್ಲ. ಆದರೆ, ಹನ್ನೆರಡು ತಲೆಮಾರುಗಳನಂತರ ಘೇಂಡಾಕರ್ಣನು ಹುಟ್ಟಿದಾಗ, ಗುರಾರ ಕುಲದವರು ಆ ಗಂಡು ಕೂಸಿನ ಜನನಕ್ಕೆ ಅಧಿಕವಾಗಿ ಉತ್ಸಾಹಪಟ್ಟು, ಅವನನ್ನು 'ಗುರಾರ ಕುಲದ **ಗಂಥಸು**' ಎಂದು ಕರೆಯತೊಡಗಿದರು. ಕಾಲಕ್ರಮದಲ್ಲಿ ಆ 'ಗಂಥಸು' ಶಬ್ದ 'ಗಂಡ್ಥಸು' ಎಂದಾಗುತ್ತಿದ್ದುದನ್ನು ಕಂಡು, ಗುರಾರ ಕುಲದವರೆಲ್ಲ ತಮ್ಮ ತಲೆಗಳನ್ನು ಕಲೆಹಾಕಿ, 'ಗಂಡ್ಥಸು' ಎಂಬುದನ್ನು "ಪುಂಗವ" ಎಂದು ಸಂಸ್ಕೃತಿಸಿದರು ಹೀಗೆ, ಘೇಂಡಾಕರ್ಣನು ಗುರಾರಕುಲಪುಂಗವನಾದನು.

ಇವನು "ಗೂಥಹಾರಜ್ಞಾನ ಚಿಂತಾಮಣಿ" ಎಂಬ ಶಾಸ್ತ್ರೀಯ ಗ್ರಂಥವನ್ನು ತನ್ನ ಪತ್ನಿಗೆ ನಿರೂಪಿಸಿದ ರೀತಿಯಲ್ಲಿ ಚಂಪೂಬಂಧದಲ್ಲಿ ರಚಿಸಿದ್ದನು. ಇದರಲ್ಲಿ, ಕೈ ಮೈ ತಲೆಗಳನ್ನು ಕೊಳೆಮಾಡಿಕೊಳ್ಳದ ಹಾಗೆ ತೊಪ್ಪೆ ಹೊರು

ವುದು ಹೇಗೆ ಎಂಬ ಕೌಶಲವಿದ್ಯೆಯನ್ನು ತನ್ನ ಕಾಂತೆಗೆ ಕಲಿಸಿಕೊಟ್ಟಿರಬಹುದೆಂದು ಊಹಿಸಲಾಗಿದೆ.

ಇದೇ ಕಾಲದಲ್ಲಿ ಹರೀಶ್ವರನು ತನ್ನ ಪಂಪಾಶತಕ, ಗಿರಿಜಾಕಲ್ಯಾಣಗಳನ್ನು ಬರೆದು ಮುಗಿಸಿ, ತನ್ನ ಸರಸ್ವತಿಯ ಸಂಚಾರಕ್ಕೆ ಚಂಪೂವಾಹನದ ಚಲನೆ ಸಾಲದೆಂದು ರಘಟಾಬಂಧದಲ್ಲಿ ಪುರಾತನರು ಅರುವತ್ತುಮೂವರ ಚರಿತ್ರೆಗಳನ್ನು ಮೂರು ಮೂರು ದಿನಗಳಿಗೊಂದೊಂದರಂತೆ ರಚಿಸಿಡುತ್ತಿದ್ದನು. ಅವನ ಸೋದರಳಿಯನಾದ ರಾಘವಾಂಕನಾದರೋ ತನ್ನ ಅಮೋಘವಾದ ಹರಿಶ್ಚಂದ್ರ ಕಾವ್ಯವನ್ನು ಬರೆದು, ಸೋದರಮಾವನ ನಿರ್ದೇಶದಂತೆ ಸಿದ್ಧರಾಮ ಪುರಾಣವನ್ನು ಪ್ರಾರಂಭ ಮಾಡಿದ್ದನು. ನಡುವೆ ನಡುವೆ, ಮಾವನು ಓಲೆಗಳನ್ನು ಬರೆದು ಬರೆದು ಕೆಳಗಿಟ್ಟಂತೆ ತಾನು ಅವನ್ನು ಓದಿ ಓದಿ ಮುಗಿಸುತ್ತಿದ್ದನು. ಒಂದು ಸಲ ಓದಿದ್ದೆ ಸಾಕು, ರಾಘವಾಂಕನಿಗೆ ಅದು ಕಂಠಗತವಾಗುತ್ತಿತ್ತು. ತಾನು ಅನುಭವಿಸಿ ಆನಂದಪಟ್ಟುದನ್ನು ಇತರರೂ ಅನುಭವಿಸಿ ಆನಂದಪಡಲೆಂದು, ರಾಘವಾಂಕನು, ಕನ್ನಡಕ್ಕೆ ಕಿವಿಗೊಡುವವರಿಗೆಲ್ಲ ಹರಿಹರನ ರಗಳೆಗಳನ್ನು, ಅವು ಪ್ರಕಟವಾಗುವ ಮೊದಲೇ, ಕೇಳಿಸುತ್ತಿದ್ದನು. ಕೇಳಿದವರೆಲ್ಲ ಮೈಮರೆತು ಪುಳಕಿಸುತ್ತಿದ್ದರು. ಕನ್ನಡ ನಾಡಿನ ತುಂಬ ಹರಿಹರ ರಾಘವಾಂಕರ ಹೆಸರೇ ಹೆಸರಾಗಿಬಿಟ್ಟಿತು.

ಅವರ ಕೃತಿಗಳ ಹಾಗೆ ತನ್ನ "ಗೂಢಹಾರಜ್ಞಾನ ಚಿಂತಾಮಣಿ'ಯು ಪ್ರಚಾರಕ್ಕೆ ಬರಲಿಲ್ಲವೆಂಬ ಕೊರತೆ ಫೇಂಡಾಕರ್ಣನಿಗೆ ಒಳಗೊಳಗೇ ಕುದಿಯುತ್ತಿತ್ತು.

ಒಂದು ಸಲ – ಹರಿಹರ ಆಗತಾನೆ ತನ್ನ "ಬಸವರಾಜದೇವರ ರಗಳೆ" ಯನ್ನು ಅರ್ಧ ಮುಗಿಸಿದ್ದ; ಅದು ಅವನು ಹಿಂದೆ ಬರೆದಿದ್ದುದನ್ನೆಲ್ಲ ಮೀರಿಸಿ ಮೆರೆಯುತಿಬಿಟ್ಟಿತ್ತು. ಅದನ್ನು ಆಗತಾನೆ ಓದಿ ಮುಗಿಸಿದ್ದ ರಾಘವಾಂಕನಿಗೆ ಆ ಆನಂದವನ್ನು ಇತರರೊಡನೆ ಹಂಚಿಕೊಳ್ಳಬೇಕೆಂಬ ಹಂಬಲ. ತನ್ನ ಕಣ್ಣಿಗೆ ಮೊದಲು ಗೋಚರವಾದ ಫೇಂಡಾಕರ್ಣನಿಗೆ ಅದನ್ನು ಕೇಳಿಸಬೇಕೆಂದು "ಏನಯ್ಯ, ಹರಿಹರನ ಹೊಸ ಕೃತಿ ಕೇಳಿರುವೆಯ?" ಎಂದ. ಫೇಂಡಾಕರ್ಣನಿಗಂತೂ ಹರಿಹರ ರಾಘವಾಂಕರ ಮೇಲೆ ಹೊಟ್ಟೆಯುರಿ ಇದ್ದೇ ಇತ್ತು. "ಓ, ನಿಮ್ಮ ಹರಿಹರನಿಗೆ ಬರೆಯುವುದಕ್ಕೆ ಏನು ಬರುತ್ತೆ?" ಎಂದು ತಿರಸ್ಕಾರ

ದಿಂದ ನಕ್ಕ. ರಾಘವಾಂಕ ಬೆಚ್ಚಿಬಿದ್ದ. ಹರಿಹರನಿಗೆ ಮೆಚ್ಚದೆ ಹೋದವರನ್ನು ಅವನು ಅದುವರೆಗೆ ಕಂಡಿರಲಿಲ್ಲ. ಮೊದಲು ಬೆಚ್ಚಿಬಿದ್ದ, ಬಳಿಕ "ಅಯ್ಯೋ ಪ್ರಾಣಿ! ಪಾಪ, ಹರಿಹರನ ರುಚಿ ಕಾಣ!" ಎಂದು ಕನಿಕರಿಸಿದ.

ಆದರೆ, ಅಷ್ಟರಲ್ಲಿ ಘೇಂಡಾಕರ್ಣನು "ಆಹಾ! ಒಂಟೆಗಳ ಮದುವೆಯಲ್ಲಿ ಕತ್ತೆಗಳು ಹಾಡಿದುವಂತೆ! ಒಂಟೆಯ ರೂಪಕ್ಕೆ ಕತ್ತೆ ಮೆಚ್ಚಿತಂತೆ! ಕತ್ತೆಯ ಕಂಠಕ್ಕೆ ಒಂಟೆ ಸೋತಿತಂತೆ! ಹರಿಹರನಿಗೆ ರಾಘವಾಂಕ ರಂಘೋಲು! ರಾಘವಾಂಕನಿಗೆ ಹರಿಹರ ಕಹಳೆ! ಈ ಪರಸ್ಪರಪ್ರಶಂಸಾಪದ್ಧತಿ ಇಲ್ಲದೆ ಹೋದರೆ ನಿಮ್ಮ ಹೆಸರು ಹತ್ತು ಕಿವಿಗೆ ಹೇಗೆ ತಾಗೀತು?" ಎಂದ. ಅದಕ್ಕೆ ರಾಘವಾಂಕ ಉತ್ತರ ಹೇಳುವ ಗೋಜಿಗೆ ಹೋಗಲಿಲ್ಲ. ಸುಮ್ಮನಿದ್ದ.

ಪುನಃ ಘೇಂಡಾಕರ್ಣ "ಅವನಿಗೆ ನೀನು ಸೋದರಳಿಯ. ನಿನಗೆ ಅವನು ಸೋದರಮಾವ. ಆದ್ದರಿಂದ ನೀನು ಬರೆದುದಕ್ಕೆ ಅವನು ಬಾಯಿ ಬಿಡುವುದೂ, ಅವನು ಗೀಚಿದ್ದಕ್ಕೆ ನೀನು ಬಾಯಿ ಬಿಡುವುದೂ ಸಹಜ" ಎಂದ. ಅದಕ್ಕೂ ರಾಘವಾಂಕ ಸುಮ್ಮನಿದ್ದ

"ಅವನೂ ವೀರಶೈವ, ನೀನೂ ವೀರಶೈವ. ವೀರಶೈವನು ವೀರಶೈವನ ಕೃತಿಗಳನ್ನು ಹೊಗಳಿ ಮೆಚ್ಚಬೇಕಾದದ್ದೆ" ಎಂದು ಘೇಂಡಾಕರ್ಣ ಚುಚ್ಚಿ ಹೇಳಿದ

ರಾಘವಾಂಕನ ಮೈ ಬರುಬರುತ್ತ ಬಿಸಿಬಿಸಿಯಾಯಿತು "ಘೇಂಡಾಕರ್ಣ, ನೀನು ಏನು ಬೇಕಾದರೂ ಹೇಳಿಕೊ. ಹರಿಹರನಿಗೆ ಬರೆಯಲು ಬಾರದು, ಎನ್ನು. ನನಗೆ ಸಾಹಿತ್ಯದ ಸವಿ ತಿಳಿಯದು, ಎನ್ನು ನಾನೂ ಅವನೂ ಬಂಧುಗಳಾದ್ದರಿಂದ ಪರಸ್ಪರ ಪ್ರಶಂಸೆ ಆಗುತ್ತದೆ, ಎನ್ನು. ಆದರೆ ಜಾತಿಯನ್ನು ಕಾರಣ ಮಾಡಿಕೊಂಡು ಸಾಹಿತ್ಯಕ್ಕೆ ನಾವು ಬೆಲೆ ಕಟ್ಟುವೆವು ಎಂದು ಮಾತ್ರ ಹೇಳಬೇಡ. ಈ ನತದೃಷ್ಟ ಭಾವನೆಯನ್ನು ನಾಡಿನಲ್ಲಿ ಹರಡಬೇಡ. ಅಷ್ಟು ಕೃಪೆಮಾಡು" ಎಂದ.

"ನಾನು ಹೇಳಿದ್ದು ನಿಜ ಅಲ್ಲವೆ, ಹೇಳು. ಹರಿಹರನು ವೀರಶೈವನಲ್ಲದೆ ಹೋಗಿದ್ದರೆ ಅವನ ಕೃತಿಯನ್ನು ಹೀಗೆ ಹಿರಿದುಮಾಡುತ್ತಿದ್ದಿರೇನು? ಎಂದಿಗೂ ಇಲ್ಲ. ಈಗ ನನ್ನ ಕೃತಿ–ನಿಮ್ಮ ಯಾರೊಬ್ಬರ ಬಾಯಲ್ಲಿ ತಪ್ಪಿಯಾದರೂ

ಜಾತಿಯಲ್ಲ. ಅಲ್ಲವೆ? ನಿಮ್ಮ ಶಿವನಾಣೆ, ನಿಮ್ಮ ಶರಣರಾಣೆ, ಹೇಳು" ಎಂದ ಘೇಂಡಾಕರ್ಣ.

ಅವನು ಮತ್ತೆ ಮತ್ತೆ ಹಾಗೇ ಹೇಳುತ್ತಿರಲಾಗಿ, ರಾಘವಾಂಕನ ಸೈರಣೆ ಸಣ್ಣದಾಗುತ್ತ ಬಂತು ಘೇಂಡಾಕರ್ಣನ ಕೆನ್ನೆಗೆ ಒಂದು ಅಪ್ಪಳಿಸಿಯೇಬಿಟ್ಟ. ಘೇಂಡಾಕರ್ಣನ ಐದು ಹಲ್ಲು ಉದುರಿಹೋದುವು.

ಹೊಡೆದ ಮೇಲೆ, "ಛೆ! ಹೊಡೆಯಬಾರದಾಗಿತ್ತು!" ಎನ್ನಿಸಿತು, ರಾಘವಾಂಕನಿಗೆ. "ಆನಿವೇಕಿ, ನಿನ್ನ ಮಾತಿಗೆ ಸೈರಣೆ ಕೆಟ್ಟು ನಿನ್ನನ್ನು ಹೊಡೆದದ್ದು ನನ್ನ ತಪ್ಪು. ನೀನೇನು ಮಾಡೀಯೆ, ಅಜ್ಞಾನಿ! ನೀನು ಇದೇ ದೃಷ್ಟಿಗೆ ನೇಣು ಹಾಕಿಕೊಳ್ಳುವೆಯಾದರೆ, ಕವಿಯ ಜಾತಿ ನೋಡಿಕೊಂಡು ಅವನ ಕಾವ್ಯಕ್ಕೆ ಮಣೆ ಹಾಕುವರೆಂಬುದೇ ನಿನ್ನ ನಂಬಿಕೆಯಾದರೆ, ನನ್ನ ಶಿವದಾರ ಹಿಡಿದು ಹೇಳುತ್ತೇನೆ ನೋಡು: ನೀನಾಗಲಿ ನೀನು ಗೀಚಿದ್ದಾಗಲಿ ಮೂರು ದಿನ ಬದುಕಲಾರಿರಿ. ನಿನ್ನ ಈ ಹಾಳು ದೃಷ್ಟಿಯನ್ನು ನೀನು ತಿದ್ದಿ ಕೊಳ್ಳದೆ ಹೋದರೆ, ನಿನ್ನ ಕುಲದ ನಾಶ ಕಟ್ಟಿಟ್ಟ ಹಾಗೆಯೇ ಸರಿ!" ಎಂದು ಗದರಿಸಿ, ರಾಘವಾಂಕನು ಹೊರಟುಹೋದನು.

ಅವನು ಆ ದಿವಸ ಹೇಳಿದ ಹಾಗೆಯೇ ಈಗ ಘೇಂಡಾಕರ್ಣನ ಹೆಸರಾಗಲಿ, ಅವನ ಕಾವ್ಯವಾಗಲಿ ಉಳಿದಿಲ್ಲ. ಅವನ ಗುರಾರಕುಲವೂ ಈಗ ಇಲ್ಲ ಆದರೆ ಹರಿಹರ ರಾಘವಾಂಕರನ್ನು ಇಂದಿಗೂ ಕನ್ನಡಿಗರೆಲ್ಲ ಜಾತಿಭೇದವಿಲ್ಲದೆ ಸ್ಮರಿಸಿ ಸೇನಿಸುತ್ತಿದ್ದಾರೆ.

× × × ×

ಇತ್ತ ಮುರಿದು ಬಿದ್ದ ತನ್ನ ಐದು ಹಲ್ಲುಗಳನ್ನು ನೆಲದಿಂದ ಆಯ್ದೆತ್ತಿ ಕೊಂಡು, ಘೇಂಡಾಕರ್ಣನು ಕಣ್ಣೀರು ಸುರಿಸುತ್ತ ನಿಂತಿದ್ದನು ಆ ದಾರಿ ಯಲ್ಲಿ ಬಂದವರು ಯಾರೋ "ಇದೇನು?" ಎಂದು ಕೇಳಿದರು. "ಹರಿಹರನ ಕೃತಿಗಳಲ್ಲಿ ಹುರುಳಿಲ್ಲ, ಎಂದೆ. ಅಷ್ಟಕ್ಕೇ ಸಿಟ್ಟಾಗಿ ರಾಘವಾಂಕ ನನ್ನ ಕೆನ್ನೆಗೆ ಹೊಡೆದ" ಎಂದ, ಘೇಂಡಾಂಕರ್ಣ. ಕೇಳಿದವರು "ಛೆ, ಹಾಗೇಕೆ ಹೇಳಿದೆ? ಅಷ್ಟೂ ಬುದ್ಧಿಯಿಲ್ಲವೆ ನಿನಗೆ?" ಎಂದು ಛೀಮಾರಿಮಾಡಿ ಹೋದರು.

ಹತ್ತು ಹೆಜ್ಜೆ ಹೋಗುವುದರೊಳಗಾಗಿ ಇನ್ನೊಬ್ಬರು ಎದುರಾಗಿ, ಅವನ ಖಿನ್ನತೆಗೆ ಕಾರಣ ಕೇಳಿದರು. "ರಾಘವಾಂಕ ಸಿಕ್ಕಿದ್ದ. ಅವನ ಹರಿಶ್ಚಂದ್ರ

ಕಾವ್ಯ ಅಷ್ಟು ಚೆನ್ನಾಗಿಲ್ಲ, ಎಂದೆ ಅಷ್ಟಕ್ಕೇ ಅವನು, ಸಿಟ್ಟುಮಾಡಿಕೊಂಡು, ನನ್ನ ಕೆನ್ನೆಗೆ ಹೊಡೆದ" ಎಂದು ಗೋಳಾಡಿದ. ಅದನ್ನು ಕೇಳಿದವರು "ನೀನು ಹರಿಶ್ಚಂದ್ರ ಕಾವ್ಯ ಚೆನ್ನಾಗಿಲ್ಲ ಎಂದದ್ದು ತಪ್ಪು. ರಾಘವಾಂಕ ಅಷ್ಟಕ್ಕೇ ನಿನ್ನ ಕೆನ್ನೆಗೆ ಹೊಡೆದದ್ದೂ ತಪ್ಪು" ಎಂದು ಅಂದು ಹೋದರು.

ಮುಂದೆ ಹತ್ತು ಹೆಜ್ಜೆ ಇಡುವುದರೊಳಗಾಗಿ ಘಂಟಾಕರ್ಣನ ಬುದ್ಧಿ ಚುರುಕಾಯಿತು. "ಅಲ್ರೀ, ಈ ಹರಿಹರ ಮಹಾಕವಿಯಂತೆ! ಕವಿಗೆ ಇರಬೇಕಾದ ಉದಾರಹೃದಯ ಮಾತ್ರ ಇವನಿಗಿಲ್ಲ ಮಿಕ್ಕವರೆಂದರೆ ಇಷ್ಟಿಷ್ಟೂ ಸೈರಣೆಯಿಲ್ಲ. ಅವನ ಸೋದರಳಿಯ ರಾಘವಾಂಕ ಅಷ್ಟು ಸೊಗಸಾದ ಹರಿಶ್ಚಂದ್ರ ಕಾವ್ಯ ಬರೆದನಲ್ಲ - ಅದಕ್ಕೆ ಹರಿಹರ ಹೊಟ್ಟೆಯಕಿಚ್ಚು ಪಟ್ಟುಕೊಂಡು, 'ಹರಸ್ತುತಿ ಮಾಡದೆ ನರಸ್ತುತಿ ಮಾಡುವೆಯಾ?' ಎಂದು ಅವನ ಕೆನ್ನೆಗೆ ಜೋರಾಗಿ ಹೊಡೆದ ರಾಘವಾಂಕನ ಐದು ಹಲ್ಲು ಉದುರಿಹೋಯಿತು. ಈ ಮಹಾಕವಿ ಹರಿಹರನ ಹೃದಯದ ನಿದರ್ಶನವಾಗಿ ಇದೋ - ಈ ಐದು ಹಲ್ಲು ನೋಡಿ!" ಎಂದು ರಾಘವಾಂಕನಿಂದ ತಾನು ಮುರಿಸಿಕೊಂಡ ಐದು ಹಲ್ಲುಗಳನ್ನು ಅಂಗೈಯಲ್ಲಿಟ್ಟುಕೊಂಡು ತೋರಿಸಿದ. ಅಂದಿನಿಂದ ಈ ಕತೆಗೆ ಕಾಲು ಬಂತು

ಇವೊತ್ತಿಗೂ ಈ ಕತೆ ಪ್ರಚಾರದಲ್ಲಿದೆ ಗುರಾರಕುಲಪುಂಗವ ಘಂಟಾಕರ್ಣ ಕಣ್ಮರೆಯಾದರೂ, ಮನಸ್ಸಿಗೆ ಮರೆಯಾಗಿದ್ದರೂ, ಅವನು ಸೃಷ್ಟಿಸಿದ ಈ ಕತೆ ಮಾತ್ರ ಇನ್ನೂ ಬದುಕಿದೆ.

# ಬಳೆ ತೊಟ್ಟನಾ ಭೀಮಸೇನ

## (ಭೀಮಭಾರತದ ಬೃಹನ್ನಾರೀಪರ್ವ)

ಉತ್ತರಗೋಗ್ರಹಣದ ಕಾಲದಲ್ಲಿ ಕೌರವರು ಪಾಂಡವರ ಅಜ್ಞಾತವೇಷವನ್ನು ಹರಿದುಹಾಕಿದರು. ಆ ಕಾಲವು ಪೂರ್ವಾಷಾಢ ಉತ್ತರಾಷಾಢಗಳ ಸಂಧಿಕಾಲವಾಗಿದ್ದದ್ದರಿಂದ "ಹದಿಮೂರನೆಯ ವರ್ಷ ಇನ್ನೂ ಮುಗಿದಿಲ್ಲ. ಆದ್ದರಿಂದ ಪುನಃ ಹನ್ನೆರಡು ವರ್ಷ ವನವಾಸ" ಎಂದು ಶಕುನಿ ಕರ್ಣ ದುರ್ಯೋಧನ ಮೊದಲಾದವರೂ, "ಹದಿಮೂರನೆಯ ವರ್ಷ ಮುಗಿದಿದೆ. ನೀವು ಸುಮ್ಮನೆ ರಾಂಗ್‌ಪೀಸ್ ಮಾಡದೆ, ಅವರವರಿಗೆ ಅವರವರ ಅರ್ಧ ರಾಜ್ಯ ಕೊಡಬೇಕು" ಎಂದು ಭೀಷ್ಮ ದ್ರೋಣ ಕೃಪ ಮೊದಲಾದವರೂ ತಾವೇ ಪಾಂಡವರು ಕೌರವರು ಎಂಬಂತೆ ಕಾದಾಡತೊಡಗಿದರು.

ಆ ಸಮಯದಲ್ಲಿ ಮಹಾ ಧರ್ಮಿಷ್ಠನಾದ ಧರ್ಮರಾಯನು ಭೀಷ್ಮರನ್ನು ಕುರಿತು "ತಾತಾ, ನಮಗೋಸ್ಕರವಾಗಿ ನಿಮ್ಮನಿಮ್ಮಲ್ಲಿ ಈ ಒಳಜಗಳವೇಕೆ? ನಿಮ್ಮ ಐಕಮತ್ಯವನ್ನು ಕಾಪಾಡಿಕೊಡುವುದಕ್ಕಾಗಿ ನಾನೇ ಮತ್ತೆಯೂ ಸೋಲುತ್ತೇನೆ. ಹದಿಮೂರನೆಯ ವರ್ಷದ ಅವಧಿ ಇನ್ನೂ ಮುಗಿದಿಲ್ಲವೆಂದೇ ಇಟ್ಟುಕೊಳ್ಳೋಣ. ಮೊದಲೇ ಹೋಳುಹೋಳಾಗಿರುವ ಈ ಭರತವಂಶವು ಇನ್ನೂ ಚೂರು ಚೂರಾಗುವುದು ಬೇಡ ಒಳ್ಳೆಯದು. ನಾವು ಪುನಃ ಹನ್ನೆರಡು ವರ್ಷಗಳ ವನವಾಸವನ್ನೂ ಒಂದು ವರ್ಷದ ಅಜ್ಞಾತವಾಸವನ್ನೂ ಮುಗಿಸಿ ಬರುತ್ತೇವೆ. ನೀವು ನೀವು ಸುಖವಾಗಿರಿ" ಎಂಬುದಾಗಿ ಹೇಳಿ, ತನ್ನ ತಮ್ಮಂದಿರಿಗೆ ತನ್ನನ್ನು ಹಿಂಬಾಲಿಸಲು ಸಂಜ್ಞೆ ಮಾಡಿದನು.

ಆಗ ಮಹಾ ಪರಾಕ್ರಮಶಾಲಿಯಾದ ಭೀಮಸೇನನು ತನ್ನ ಮೀಸೆಗಳನ್ನು ಕಟಕಟನೆ ಕಡಿಯುತ್ತ, "ಹೇ ಅಗ್ರಜಾ, ನೀನು ಯಮನ ಮಗನಲ್ಲ, ಸಾಕ್ಷಾತ್

ಯಮನ ಅಪ್ಪ ನಮಗೂ ದ್ರೌಪದಿಗೂ ನೀನು ಕೊಡುತ್ತಿರುವ ಚಿತ್ರಹಿಂಸೆಗಳನ್ನು ಬರೆದಿಡಲು ಚಿತ್ರಗುಪ್ತನ ದಫ್ತರಗಳು ನಾಲವು. ಗಂಡಸರೆನ್ನಿಸಿಕೊಂಡು ಮೀಸೆ ಬೆಳಸಿರುವ ನಾವು ಪತಿವ್ರತೆಯರಾದ ಪತ್ನಿಯರಂತೆ ಮುಖಕ್ಕೆ ಮುಸುಕೆಳೆದುಕೊಂಡು ನಿನ್ನನ್ನು ಹಿಂಬಾಲಿಸುತ್ತಿದ್ದೇವೆ. ಆದರೆ ಈ ದಫ ನಾನು ನಿನ್ನೊಡನೆ ಮತ್ತೆ ವನವಾಸಕ್ಕೆ ಬಂದರೆ, ದ್ರೌಪದಿ ನನ್ನನ್ನು ದಫನ್ ಮಾಡಿಬಿಟ್ಟಾಳು. ಆದ್ದರಿಂದ, ಈ ಸಲ ನಾನು ಪ್ರತ್ಯೇಕವಾಗಿ ವನವಾಸವನ್ನೂ ಪ್ರತ್ಯೇಕ ಅಜ್ಞಾತವಾಸವನ್ನೂ ನಡಸಿಕೊಳ್ಳುತ್ತೇನೆ" ಎಂದು ಹೇಳಿ ಮುಖ ತಿರುಗಿಸಿಕೊಂಡು 'ಲೋ!' ಎನ್ನುವುದರೊಳಗಾಗಿ ಮಂಗಮಾಯವಾದನು.

ಹೀಗೆ ಭೀಮಸೇನನು ಇತ್ತ ವನವಾಸದಲ್ಲಿರುವಾಗ ಅತ್ತ ದೇವೇಂದ್ರನು ಹೀಗೆಂದು ಚಿಂತಿಸಿದನು: "ಆಹಾ! ಹಿಂದೆ ನನಗೆ ನಿವಾತಕವಚರಿಂದ ಬಾಧೆಯುಂಟಾದಾಗ ನನ್ನ ಮಗನಾದ ಅರ್ಜುನನು ಅವರನ್ನು ಕೊಂದು ನನ್ನ ಪ್ರಾಣವುಳಿಸಿದನು ಈಗಲಾದರೋ ಈ ನಿಪಿತ್ತಕವಚರು ತಲೆಯೆತ್ತಿಕೊಂಡಿದ್ದಾರೆ. ಈಗಲೂ ಅರ್ಜುನನನ್ನು ಕರೆಯಬಹುದಾದರೂ, ಮಗನಾದವನಿಗೆ ತಂದೆಯಾದ ನಾನು ಮೇಲಿಂದ ಮೇಲೆ ಕೈಯೊಡ್ಡುತ್ತಿದ್ದರೆ, ನನಗೆ ಮಾನ ಬರುವುದಿಲ್ಲ ಆದ್ದರಿಂದ ಈ ಸಲ ಇವರ ಪಿತ್ತವನ್ನು ವಾತಾತ್ಮಜನಿಂದ ಇಳಿಸೋಣ. ಹಿಂದೆ ಅರ್ಜುನನಿಗೇ ಅರ್ಧಾಸನವನ್ನು ಕೊಟ್ಟಿರುವಾಗ ಈ ಬೃಹದ್‌ಭೀಮನಿಗೆ ಮುಕ್ಕಾಲು ಆಸನವನ್ನಾದರೂ ಕೊಡಬೇಕು. ಆದರೂ ಚಿಂತೆಯಿಲ್ಲ ನ್ಯಾಯವಾಗಿ, ಅವನ ಗಾತ್ರವನ್ನು ಗಮನಿಸಿದರೆ, ಅವನಿಗೆ ಪೂರ್ತಿ ಆಸನವನ್ನೇ ಬಿಟ್ಟುಕೊಟ್ಟರೂ ಅನ್ಯಾಯವಲ್ಲ. ಆದರೆ, ಮುಂದೆ ನಿಶ್ಲೇಷ್ಮ ಕವಚರೇನಾದರೂ ಕ್ಯಾಕರಿಸಿ ಕಾಟಕೊಟ್ಟರೆ, ಆಗ ನಕುಲಸಹದೇವರ ಕಾಲು ಹಿಡಿಯಬೇಕಾದೀತು. ಅಂತಹ ಸಂದರ್ಭದಲ್ಲಿ ಆ ಹಸುಳೆಗಳಿಬ್ಬರಿಗೂ ಸೇರಿ ಒಂದು ಕಾಲು ಆಸನವನ್ನಾದರೂ ಕೊಡದೆ ಹೋದರೆ, ಸ್ವರ್ಗದ ಇಂದ್ರಪದವಿಗೇ ಅವಮಾನ."

ಹೀಗೆಂಬುದಾಗಿ ಸಹಸ್ರಾಕ್ಷನು ಕಣ್ಣೊರಸಿಕೊಂಡು ನಿಶ್ಚಯಿಸಿ, ಭೀಮನ ಹತ್ತಿರ 'ದಮ್ಮಯ್ಯ' ಎಂದನು. ಆಶ್ರಿತವತ್ಸಲನಾದ ಭೀಮನು ಆ ನಿಪಿತ್ತ ಕವಚರನ್ನು ಸಂಹರಿಸಿ, ಇಂದ್ರನ ಕೃಪೆಗೆ ಪಾತ್ರನಾಗಿ, ಅವನ ಕೋರಿಕೆಯಂತೆ ತಾನು ದಿವಂಗತನಾಗಿ ಸ್ವರ್ಗಸ್ಥನಾದನು.

ಅದೇ ಸಂದರ್ಭದಲ್ಲಿ ಉರ್ವಶಿಯು ಭೀಮನ ಶಯ್ಯಾಗೃಹಕ್ಕೆ ಬಂದು, "ಓ ಅರ್ಜುನನ ಅಣ್ಣಾ, ನಿನ್ನನ್ನು ಕಂಡಾರಭ್ಯ ನಾನು ಹಿಡಿಂಬೆಯಾಗಿದ್ದೇನೆ, ನೀನು ಮಾತ್ರ ಅರ್ಜುನನಾಗಬೇಡ" ಎಂದು ಮೇಲೆ ಹಾಯಬಂದಳು. ಆಗ, ಬೆರಳು ತೋರಿಸಿದರೆ ಹಸ್ತನನ್ನೇ ಹುಡಿಮಾಡುವ ಭೀಮಸೇನನು ಅದಕ್ಕೆ ಉತ್ತರವಾಗಿ "ಹೇ ಜನನಿ, ಮಾತೇ, ತಾಯೇ, ನನಗೆ ಯಾವ ಅರ್ಜುನನು ಅನುಜನೋ, ಅವನಿಗೆ ಯಾವ ದೇವೇಂದ್ರನು ಜನ್ಮದಾತನೋ, ಆತನಿಗೆ ಯಾವ ನೀನು ಬಂಗಾರದವಳೋ – ಆ ನೀನು ಪಾಪೆಯಲ್ಲಿ ನನಗೆ ಚಿಕ್ಕಮ್ಮ ನಾಗಬೇಕು. ಇದೋ ನನ್ನ ನವರತ್ನಖಚಿತವಾದ ಕಿರೀಟವನ್ನು ಹೊತ್ತ ತಲೆ. ಅದೇ ಕಿರೀಟವನ್ನು ನೂಪುರದಂತೆ ಧರಿಸಲು ಯೋಗ್ಯವಾದ ಕಾಲಿನಂತಿರುವ ನಿನ್ನ ಪಾದಪದ್ಮಗಳೆಲ್ಲಿ ?" ಎಂದು ಹುಡುಕತೊಡಗಿದನು.

ಆಗ ಉರ್ವಶೀನಾರಿ ಮುನಿದು ಮಾರಿಯಾಗಿ "ನೀನೂ ಅರ್ಜುನನು ಆದ ಹಾಗೆಯೇ ಆಗು!" ಎಂದು ಶಾಪ ಕೊಟ್ಟಳು

ಭೀಮನು ಆ ಶಾಪವನ್ನು ಸಂತೋಷದಿಂದ ಜುಟ್ಟಿನೊಳಗೆ ಸೇರಿಸಿ ಗಂಟುಹಾಕಿಕೊಂಡು, ತನ್ನ ಹನ್ನೆರಡು ವರ್ಷಗಳ ವನವಾಸವನ್ನು ಮುಗಿಸಿ ಯಾದ ಮೇಲೆ, ಬಳೆ ತೊಟ್ಟು, ಕುಪ್ಪಸ ಕಟ್ಟಿ, ಸೀರೆಯುಟ್ಟು, ಕಿರಾಟನಗರಕ್ಕೆ ಹೋಗಿ, ಅಲ್ಲಿನ ರಾಜನ ಅರಮನೆಯ ಅಡುಗೆಯ ಮನೆಯಲ್ಲಿ ಅಡುಗೂಳಜ್ಜಿ ಯಾಗಿ ಜೀತಕ್ಕೆ ಸೇರಿಕೊಂಡನು.

ಆಗ ಚಾಣಾಕ್ಷನಾದ ಶಕುನಿಯು ಗೂಢಚಾರರನ್ನು ಕರೆದು, "ಈ ಸಲ ಪಾಂಡವರ ಅಜ್ಞಾತವಾಸವನ್ನು ಭೇದಿಸುವುದು ಕಷ್ಟವಲ್ಲ ಮೈ ಗಟ್ಟಿ ಯಾದರೂ ಬುದ್ಧಿ ಮಟ್ಟಾದ ಭೀಮನು ರೆಕ್ಕೆ ಬಲಿಯದ ಹಕ್ಕಿಯಂತೆ ಒಂಟಿ ಯಾಗಿ ಹೋಗಿರುವುದರಿಂದ ಅವನ ವೇಷವನ್ನು ಎಳೆಯ ಮಕ್ಕಳು ಕೂಡ ಕಿತ್ತುಹಾಕಬಹುದು. ಈಗ ನೀವು ಈ ದೇಶದ ಪ್ರತಿಯೊಬ್ಬ ರಾಜನ ಮನೆಗೂ ಹೋಗಿ, ಅಲ್ಲಿಯ ಅರಮನೆಯವರು ಬಿಸಾಡುವ ಎಂಜಲನ್ನು ರುಚಿನೋಡಿ ಬನ್ನಿ. ಯಾವ ಎಂಜಲು ಅತ್ಯಂತ ರುಚಿಕರವಾಗಿರುವುದೋ ಆ ಊರಿನ ಹೆಸರು ತಿಳಿಸಿ. ಮುಂದಿನದನ್ನು ನಾನು ನೋಡಿಕೊಳ್ಳುತ್ತೇನೆ" ಎಂದನು.

ಗೂಢಚಾರರು ದಿಕ್ಕುದಿಕ್ಕಿಗೂ ಹೋಗಿ, ತಿನ್ನಬಾರದ ಎಂಜಲುಗಳನ್ನೆಲ್ಲ

ತಿಂದು ಬಂದರು. ಕಿರಾಟನಗರದ ಅರಮನೆಯ ಎಂಜಲೇ ಅತ್ಯಂತ ರುಚಿ ಯೆಂದು ವರದಿಯೊಪ್ಪಿಸಿದರು.

ಆಗ ಶಕುನಿಯು ದುರ್ಯೋಧನನನ್ನೂ ಕರ್ಣನನ್ನೂ ಕರೆದುಕೊಂಡು ಕಿರಾಟನಗರಕ್ಕೆ ಹೋದರು. ಕಿರಾಟರಾಜನು ಅವರ ಗೌರವಾರ್ಥವಾಗಿ ವಿಶೇಷ ವಾದ ಭಕ್ಷ್ಯಭೋಜ್ಯಗಳನ್ನು ಅಡುಗೆ ಮಾಡಿಸಿದನು. "ಇಷ್ಟು ಸೊಗಸಾಗಿ ಅಡುಗೆ ಮಾಡಿದವರನ್ನು ನೋಡಬೇಕು" ಎಂದು ಅತಿಥಿಗಳು ಇಷ್ಟಪಟ್ಟರು. ಅಡುಗೂಳಜ್ಜಿ ಉಪಾಯವಿಲ್ಲದೆ ಹೊರಗೆ ಬರಬೇಕಾಯಿತು.

ದುರ್ಯೋಧನನು ಆ ಬೃಹನ್ನಾರೀಸ್ವರೂಪವನ್ನು ನೋಡಿದ ಕೂಡಲೆ "ಭೀಮಾ!" ಎಂದನು. ಒಡನೆ ಭೀಮನು ಕುಂಬಳಕಾಯಿ ಕಳ್ಳನಂತೆ ತನ್ನ ತೋಳು ತೊಡೆ ತಟ್ಟಿಕೊಂಡನು ಭೀಮನ ಅಜ್ಞಾತದ ಗುಟ್ಟು ರಟ್ಟಾಯಿತು.

"ಮತ್ತೆ ಹನ್ನೆರಡು ವನವಾಸ, ಒಂದು ಅಜ್ಞಾತ" ಎಂದನಾ ದುರ್ಯೋಧನ.

"ಮರ್ಯಾದೆಯನ್ನು ಕಳೆದುಕೊಂಡ ಮೇಲೆ ಮತ್ತೆ ಭೀಮನಿಗೆ ಈ ಭೂಮಿಯ ಗೊಡವೆಯೇಕೆ? ನಾನು ಮತ್ತೆ ಮನುಷ್ಯರಿಗೆ ಮುಖ ತೋರಿಸಿದರೆ ನನ್ನ ಮೀಸೆಗೆ ಅವಮಾನ!" ಎಂದು ಭೀಮನು ಸೆರಗಿನಿಂದ ಮುಖ ಮುಚ್ಚಿ ಕೊಂಡು, ಹೇಳದೆ ಕೇಳದೆ ಮಾಯವಾದನು.

ಭೀಮನು ಮಾಯವಾದ ವಾರ್ತೆಯನ್ನು ಕ್ರಮೇಣ ಕೇಳಿ, ಉಳಿದ ಪಾಂಡವರೂ ದ್ರೌಪದಿಯೂ "ಭೀಮನೇ ಹೋದನಂತೆ! ಭೂಮಿ ನಮಗಾದರೂ ಏಕೆ?" ಎಂದು ತಾವೂ ಏಕ್‌ದಂ ಮಾಯವಾದರು.

ಹೀಗೆ, ಅಂತೂ ಇಂತೂ ಕುಂತಿಯ ಮಕ್ಕಳಿಗೆ ರಾಜ್ಯವಿಲ್ಲದೆ ಹೋಯಿತು.

# ಕ್ವಾಣದ ಕಾಳಗ

ಹರೀಚ್ಚೆಂದ್ರ ಅಂತ ವೊಬ್ರಾಜ. ಔನೇಣ್ತಿ ಶೆಂದುಮತಿ. ಔರ್ಗ್ನೊಗ ಲೋಯಿತಸ್ವ. ಅರೀಚ್ಚೆಂದ್ರ ಬೋ ಸತ್ತೆವಂತ. ಔನೆಂದುಗೂನೂವೆ ಸಿಳ್ಳೋ ಳ್ಳೋನೆ ಅಲ್ಲ. ಅವ್ನಂತ ರಾಜ್ರು ಯಿಂದಿದ್ರೋ ಎಂಗೋ, ಈಗನ್ಕಾ ಯಿಲ್ಲ- ಮುಂದಕ್ಕೂ ಕಂಡಿತ-ವುಟ್ಟಲ್ಲಾಂತ ಕಾಣುತ್ತೆ.

ಅರೀಚೆಂದ್ರ ಮನೇ ಪುರೋಯ್ತು ವಷಿಷ್ಟ ಅಂತ ಅವಂಗೆ ಅರೀಚೆಂದ್ರ ಅಂದ್ರೆ ವುರ್ಗ್ಡಳೆ ಇದ್ದಂಗೆ ಬೋ ಇಸ್ವಾಸ ಅವನ ಸತ್ತೆದ ಇಚಾರ ವ್ಯಾಗಣು ಲೋಕ ಕ್ಯಳಗಣು ಲೋಕ ನಡತಾವಳ ಲೋಕಾದಾಗೆಲ್ಲಾ ಅರಡ್ಕೊಂಬಿಡತು.

ಇಂಗೆನೇ ಇಂಬೇಕಾರೆ, ಒಂಜಿನ ವ್ಯಾಗಳ ಲೋಕ್ದಾಗೆ ಇಂದ್ರ ಸಭೆ ನೇರ್ಕೊಂಕೂತಿದ್ದ ಅಲ್ಲಿ ವಷಿಷ್ಟಾನೂ ಇದ್ದ ಯಿಸ್ವಾಮಿತ್ರಾನೂ ಅಲ್ಲೆ ಎದುರಾಗಿದ್ದ ಓರಿಬ್ಬರ್ಗ್ನೂ ಎಣ್ಣೇಗೂ ಸಾಬೂಸಿಗೂ ಇರೊವಷ್ಟು ಇಸ್ವಾಸ. ಯಿಸ್ವಾಮಿತ್ರಂಗೆ ಬಲೆ ಸಿಟ್ಟು. ಔನ ಸಿಟ್ಟೊಂದ್ರೆ ಯೇಳಾಕಾಗಾಕಿಲ್ಲ. ಔನಿಗೇನಾರ ಶಿಟ್ಟು ಬಂತಂತೂಂದ್ರೆ ಸೈ, ಎಲ್ಲನೂ ಸುಟ್ಟು ಕರಕಮಾಡಿ ಬೆಡೋನೆ! ಏನೇಳಾನ ಔನ ಸೌರ್‍ಯವ. ವಷಿಷ್ಟಂಗೆ ಆಟೊಂದು ಶಿಟ್ಟಿಲ್ಲ. ಸೊಲ್ಪ ಮಿಶಬಾಸಿ ಆದರೇನು ? ಎಲ್ಲಾರ ಇಂತೋರಿಗೆ ಬತ್ತಪ್ಪಾ ಸಿಟ್ಟೊಂದ್ರೆ ಫೈಸಲ್.

ಯಿಂತಪ್ಪ ದ್ಯಾವೇಂದ್ರನ ಆಸ್ತಾನದ ನೆಲ ಮುಟ್ಟಿದರೆ ಚಿನ್ನಾಗೊಂತ ಕಲ್ಲಿನಾಗೆ ಮಾಡಿತ್ತಂತೆ. ಅಲ್ಲಿದ್ದೊರೆಲ್ಲ ಅದೆಂಗೆ ಚಿನ್ನಾಗದೆ ಉಳಕಂಡಿದ್ರೊ ನ್ಯಾ ಕಾಣೆ. ಕವಿಗಳ ಅವರೂ ಯೇಳ್ತಾರಂತೆ ಕಪಿಗಳು ನಾವೂ ನಂಬತೀವಿ.

ಯಿಂಗನೇ ಇರಬೇಕಾರೆ ದ್ಯಾವರಾಜನ ಮನಶಿನಾಗೊಂದು ಯೇಚ್ನೆ ಬರತ್ತೆ. ಅದೇನಪಾಂತ್ರೆ ಎಲಾ ನಡತಾವಳ ಲೋಕದಾಗೆ ಯಾರಲಾ ವೊಳ್ಳೆ ಸತ್ತೆ ಯೇಳಾರು ಔರೆ ಅಂತ. ಇಂಗೆ ಯೇಚನೆ ಬಂದದ್ದೆ ಸೈ. ಅಲ್ಲಿ ಕುಂತುದ್ದ

ನಲ್ಲಾ ವಸಿಷ್ಟ ಅವನ್ನ ಕ್ಯೇಳತಾನೆ – ಎಲ್ಲೈ ವಸಿಷ್ಟ ಮಹಾರಾಜನೇ ನೀನು ಬೂಮೀಲೋಕದೆ ಯೇನೇನು ನಡೀತಿತೆ ಅನ್ನದೆಲ್ಲಾ ಗೊತ್ತು ಅದ್ರಿಂದ ಯೇಳು ಯೇಳು ಅಲ್ಲಾರಪ್ಪಾ ವೊಳ್ಳೆ ಸತ್ವಂತರೂ ಅಂತ ಕೇಳಿದ

ಅದಕೌನು ಯಿಂಗಂತ ಯೇಳಿದ ಅಪ್ಪಾ ಅರೀಚೆಂದ್ರ ಅಂತ ವೊಬ್ಬ ಅವನೆ. ಔನು ಎಂದೂ ಸಿಳ್ಳೀ ಯೇಳಿಲ್ಲಾಂತ ಕಾಣತ್ತೆ. ನಂಗೆ ತೀಳದ ಮಟ್ಗೊ ಅವನು ವೊಳ್ಳೆ ಸತ್ತೆವಂತ, ಸಾತ್ತಿಕ ಅಂತಂದ.

ಆ ಮಾತನ ಕೇಳಿದ ಕೂಡ್ಲೆ ಯಿಸ್ವಾಮಿತ್ರಂಗೆ ನೊಣಶಿನಕಾಯಿ ಮಡಗ ದಂಗಾಯ್ತು. ಔನೆಗರಿದೋನೆ ಒಂದ್ಕಾಕಕ್ಕಾಗ್ದ. ಏ ಬುಡ ಔನ್ಯಾತರ ಸತ್ತೇವಂತ. ಔನ್ಹಲೇ ಪಾಪಿಷ್ಟ ಔನ್ಗೆ ಒಂದಫ ಮಕ್ಕಳೇ ವುಟ್ಟಿರನಿಲ್ಲ. ಅವಗ ಮಳೆದ್ಯಾವರಿಗೆ ಅರಿಕೆ ಕಟ್ಟಿಕೊಣನಂತೆ. ಯೇನಂತ ಅಂದರೆ ನಂಗೆ ಮಕ್ಕಳುಟ್ಟಿದರೆ ವುಟ್ಟಿದ ಗಳಿಗೇಲೆ ಔನ್ನ ನಿನ್ನ ಯೆಸಸಾಗಿ ಶಿಗದು ತ್ವಾರಣ ಕಟ್ತೇನಿ ಅಂತ. ಅವಗ ಒಂದು ವೊಗ ಆತು. ಆಗ ನಿನ್ನರೀಚೆಂದ್ರ ಆ ಮಗಿನ ಮ್ಯಾಗಿನ ಆಸೆಗೇ ಅದ್ನ ಕೊಡನಿಲ್ಲ. ದ್ಯಾವರು ಬಿಟ್ಟಾತಾ ? ಇಂತಾ ದಗಾಲಬಾಜಿಗಳ್ನ ಎಸ್ಟು ನೋಡೈತೋ ಅದು. ಅದಕ ಶಿಟ್ಟು ಬತು. ನಿನ್ನ ವೊಟ್ಟ್ಯಾಗ ನೀರು ಶೇರಿಕಳ, ನಿನ್ನ ವೊಟ್ಟೆ ಹೂದಿಕಳ, ನಿಂಗೆ ಗ್ಯೆಂಡೆರ್ವಾಗ ಬರ ಅಂತ ಅರೀಚೆಂದ್ರಂಗೆ ಒಂದು ರ್‍ವಾಗ ಕೊಡತು ಆ ರ್‍ವಾಗ ವುಸಾರಿ ಮಾಡಿಕಣಾಕೆ ಯಾರೋ ಒಬ್ಬ ರುಸಿಮಗನ್ನ ಕರೂದಿಮಾಡಿ ಕೊಣ ಕೊಂಬಂದನಂತೆ. ಆ ರುಸೀಗೆ ಮೂವ್ರೋರು ಐಕಳು. ಅದರಾಗ ಯಿರೇ ಮಗನ್ನ ಕೊಡೂನ ಅಂತ ಅವರವ್ವ ಯೇಳಿದ್ರೆ ಅದಕಪ್ಪಿದ್ದೊನೂ ಯೇ ವುಂಟಾ ನಂಗೆ ಪಿಂಡ ಆಕಾಕೆ ಬೇಡ್ವಾ ಅವಾ ಅಂತ ಅವನ್ನ ಕೊಡಾಕೆ ವಪ್ಪನಿಲ್ಲ. ಬೇಕಾರೆ ಆ ಕೊನೇವನ್ನ ಕೊಟ್ಟುಬಿಡಾನ ಅಂತಂದ. ಅದಕಾ ಅವ್ವಿದ್ದೋಳು ನಂಗೆ ಕಿರೀ ವೊಗಾ ಅಂದ್ರೆ ಬೋ ಇಸ್ಟ. ನಾ ಕೊಡಾಲ್ಲ ಬೇಕಾರೆ ನಡಕಲ ಮಗನ್ನೆ ಕೊಡಾನೆ ಅಂತಂದ್ಲು. ಆಗ ನಿನ್ನ ಅರೀಚೆಂದ್ರ ಆ ನಡಕಲ ಮಗನ್ನೆ ಒಂದು ಸಾವಿರ ಅಸೂಗೆ ಕರೂದಿಮಾಡಿ ಕರಕೊಂಬಂದು ಒಂದು ಯಾಗ್ಗಣದಾಗೆ ಆ ವುಡಗನ್ನ ಕಡದು ತನ್ನ ವೊಟ್ಟೆ ಹೂದು ಇಳೀಶಿಕಂಡ. ಇಂಗಂತಂದ ಆ ಯಿಸ್ವಾಸವ್ಮುತ್ರ್ಯ.

ಯಿಂಗೇನೆ ಔರಿಬ್ಬರ್ಗೂ ಬಾಳೊತ್ತು ಮಾತಿನ ಗುದ್ಯಾಟ ನೆಡೀತು ಓನೂ ಸೋಲಲವಲ್ಲ, ಈನೂ ಸೋಲಲವಲ್ಲ. ಮತ್ತೀ ಗುದ್ಯಾಟ ಎಂಗೆ ಬಗಿ ಅರೀಬೇಕಪಾ ಬಲೆ ಕಸ್ಟಾಗಿಬಿಡತು. ಈ ಪಂಚಾವತಿ ನೋಡಲಾರದೆ ಸೊರಗದೋರೆಲ್ಲ ಮಂಕಾಗಿ ಮೂಕಾಗಿ ಶುಮ್ಮಗ ಕುಂತುಬಿಟ್ಟರು ರೆಂಬೆ ಹೂರ್ನಷಿ ಶುಚಿದೇನಿ ಎಲ್ಲಾರೂವೆ ತಾಪೆ ಕಟ್ಟತಾ ಇದ್ದೋರು ಇದ್ಕಿದ್ದಂಗೆ ಗುಮ್ಮಾಗೋದರು.

ಆಗ ವಷಿಷ್ಟ ಅಂದ. ಅರೀಚೆಂದ್ರ ಯಾವಾಗನಾರ ಇನ್ನುನ್ಯಾಕೆ ಸಿಳ್ಳು ಯೇಳಿದಾಂದ್ರೆ ನಾನು ತಪ್ಪಸು ಮಾಡದು ಬಿಟ್ಟು ಯೆಂಡ ಕುಡಕಂಡು ಬಾಡು ಕಚ್ಕಂಡ ಇದ್ದುಬಿಡತೀನಿ. ಅಂದ.

ಆಗ ಆ ಸಬೇಲಿ ಇದ್ದೋನು ಚಾಡಿಕೋರ ಚಿಳ್ಳೀಕ್ಯಾತ ನಾಗಂದ ಮಹಾ ರುಸಿಗಳು ತನ್ನ ಪಾಡಿಗೆ ರಾಮ ಲಕ್ಸ್ಮಣಾ ಅಂತ ಶುಮ್ಮಕಿರಬಾರದಾ ಯೇಳತಾನೆ – ಏನಯ್ಯ ವಿಸ್ವಾಮಿತ್ರ ಕ್ಯೋಳ್ಳೋ ನಂ ವಷಿಷ್ಟ ಆಗಿದ ಸವಾಲ್ನ. ಈಗ ಸೀನೇನು ಬಾನೆ ಮಡಗತೀಯ ಬಿರೀನೆ ಮಡಗು ಅಂತಂದ.

ಅದಕಾ ಯಿಸ್ವಾಮಿತ್ರ ಯೆಂಡ ಕುಡದೋರಂಗೆ ಕಣ್ಣು ಕೆಂಪಗೆ ಮಾಡ ಕೊಂಡು ಕೂಗ್ತಾನೆ – ಏ ಜಗಳಗಂಟ, ಆ ಅರೀಚೆಂದ್ರ ಸಿಳ್ಳೀಳ್ದೆ ಅಂಗೇ ಇದ್ಬುಟ್ಟಾಂದ್ರೆ, ನನ್ನ ತಪುಸ್ಸೆಲ್ಲಾ ಔನ್ಗೇ ತರ್ಪಣ ಕೊಟ್ಬಿಡತೇನೆ. ನನ್ನ ಗಡ್ಡ ಮೀಸೆಯೆಲ್ಲ ಬೋಳಿಶಿಬುಟ್ಟು, ತಲೆಗೆ ತ್ರೈಲ ಆಕಿ ಬಾಚ್ಕೊಂಡು, ವೂ ಮುಡಕಂಡು, ಸಾವಿರ ಜನ ಯೇಣ್ತೀರನ್ನ ಮಡೀಕಂಡು, ನೂರು ಜನ ಯೆಣಾಮಕ್ಕಳ್ಗೆ ನೂರು ಸಾವಿರ ಜನ ಗಂಡಂದರ್ನ ವುಡಕ್ತ ಊರು ಕೇರಿ ಅಲೀತೀನಿ ವೋಗ್ ಅಂತ ಇಂದೇಬುಟ್ಟ.

ಇಸ್ಟಾದ ಮ್ಯಾಕೆ ಪಂಚಾಪ್ತಿ ಮುಗೀತು. ಅಲ್ಲಿಂದ ಕಸ್ಟ ಕೊಡಾಕೆ ಸುರು ಮಾಡಿದ ಯಿಸ್ವಾಮಿತ್ರ ಅರೀಚೆಂದ್ರಂಗೆ. ಅದು ಎಂಗಾಯ್ತುಪಾ ಅಂತಂದ್ರೆ ಎಳ್ಡು ಕ್ವಾಣ ಕಾಲು ಕೆರಕಂಡು ಕುಸ್ತಿಗೆ ನಿಂತುಕಂಡರೆ ಕಾಲಿಗೆ ಸಿಕ್ಕಿದ ಸೊಪ್ಪು ಸೆದೆ ಯೆಲ್ಲ ಸಾಸಾಗೋಗೋವಂಗೆ ಯಿವರಿಬ್ಬರ ವೊಡದಾಟ ದಲ್ಲಿ ಅರೀಚೆಂದ್ರ ಚಯ ಬಂದಂಗೆ ಸಣ್ಣಗಾಗೋಗ್ಬುಟ್ಟ.

—ವಿದ್ಯಾರ್ಥಿ.

# ಸತ್ಯಾ ಅರೀಚ್ಚೆಂದ್ರು

ಯಿಂಗೆ ಕ್ವಾಣನ ಕಾಳಗ ಆದಮ್ಯಾಕೆ ಏನಾತೂ ಅಂದ್ರೆ—

ಯಿಸ್ವಾಮಿತ್ರ ಯಾಂಗರ ಅರೀಚಂದ್ರನ ಕೈಲಿ ಸಿಕ್ಕೀಳಿಸಬೇಕೂಂತ ಯೋಚನೆ ಮಾಡುತ್ತಾನೆ. ಶರಿ, ಅವನ ಬುದ್ದಿ ಪ್ರಳ್ಯಾಂತಕ ಬುದ್ದಿ ಕೇಳ ಬೇಕಾ, ಒಂದು ಯೇಚನೆ ವೊಳೀತಿತೆ. ಅದೇನಪಾಂದ್ರೆ – ಏನೂ ತಿಳೀದ ತನ್ನ ಮಟದ ಮಂಕು ರುಸಿಗಳನ್ನೆಲ್ಲ ಕರದು ಯೇಳಿದ – ಯೋ ರುಸಿಗಳ್ರಾ, ನೀವೆಲ್ರೂ ವೋಗಿ ಆ ಅರೀಚೆಂದ್ರನ ಒಂದು ಯಗಣ ಮಾಡೂಂತ ಪುಸಲಾಯಿಸಿ ಅಂತ ಚೂಬುಟ್ಟ. ಬೇಕೂಪರು ಅವರೂನ್ಯೂನೆ ಆಗೇ ಆಗಲಿ ಅಂತ ರಾಜಾ ಅರೀಚೆಂದ್ರನ ಆಸ್ರಮಕ್ಕೆ ವೋದರು

ಅಲ್ಲೌನೂ ಔರಿಗೆಲ್ಲಾ ಕೈಕಾಲು ತೊಳಿಯಾಕೆ ಕುದ್ದು ಆರಿಸಿದ ಬಿಸಿ ನೀರು ಕೊಟ್ಟು, ಒರಸಿಕಳಾಕೆ ಒಗದು ಮಡಿಮಾಡಿದ ಟುವಾಲು ಮಡಗಿ. ಮಣೆ ಎಲೆ ವೂಟ ವುಪಚಾರ ಗಂದ ಯಿ[illegible]ಯ ಎಲ್ಲಾ ಮಾಡಿಶಿ. ಯಾರು ಸೋಮಿ ನೀವು, ಏನು ಬೇಡಾಕೆ ಬಂದ್ರಿ ಅಂತ ಕೇಳದ ಅದಕ ಅವರಂದರು – ನೋಡಪಾ ರಾಜಾ, ಅಂಗೆಲ್ಲಾ ಬೇಕಾಬಿಟ್ಟಿ ಕ್ಯೋಳಿದರೆ, ನಾವು ಯೋಳಿ ಸುಂಸುಂಕೆ ಬಾಯಿ ನೋಯಿಸ್ಕಣಾಕಿಲ್ಲ ನಮ್ಮ ಮಾತ ನಡೀಸ್ತೀವಿ ಅನ್ನ ದಾದರೆ ಯೇಳತೀವಿ ಅಂದ್ರು. ಅದಕ್ಕೇನ್ರಿ, ಓ ಆಗಲಿ ಅಂತ ರಾಜ ಒಪಕಂಡ.

ಆಗ ಆ ರುಸಿಗಳು ಯೇಳತಾರೆ – ಕೇಳಯ್ಯಾ ಎಲ್ವೆ ಅರೀಚೆಂದ್ರ ರಾಜಾಧಿ ರಾಜನೇ ಮಹಾತೇಜನೇ, ಕ್ಯೋಳು. ಒಂದು ಯಗ್ಗಣ ಐತೆ, ಬಲೆ ಬಾರೀದು. ಅದನಾರೂ ಯಿಂದೆ ಮಾಡಿಲ್ಲ, ಮುಂದೆ ಮಾಡಲ್ಲ. ಯಿಂದೂ ಮುಂದೂ ಇಲ್ಲದ ನೀನೇ ಇದನ್ನ ಮಾಡಬೇಕು. ಮಾತ ಕೊಟ್ಟಿದೀಯ, ಮರೀಬ್ಯಾಡ, ಅಂದ್ರು. ಮಾತಿಗೆ ತಪ್ಪಿದವ ಮಾದಿಗ ಮಾಸೋಮಿ ಅಂತ ವಪಿಕಂಡ ರಾಜ.

ಅದರಂತೆನೆ ರಾಜಾ ಯಗ್ಗಣದ ಕುದಿರೆ ಕಾಲಿಗೆ ಪೂಜೆ ಮಾಡಿ, ಅದರ ಅಣೇ ಮ್ಯಾಗೆ ತನ್ನ ಯೆಶರು ಕೆತ್ತಿಶಿ, ವೋಗು ಮಗಾ, ದೇಸದೇಸ ತಿರಿಕ್ಕೊಂಬಾ, ಅಂತ ಅಟ್ಟಬಿಡತಾನೆ. ಕುದುರೆ ಎಲ್ಲಿ ತಪ್ಪಿಶಿಕಂಡ ಬಿಡತಿತೊ ಅಂತ ತಾನೂ ಅದರಿಂದೇನೆ ಶೇನ್ಯ ತಕಂಡೋಯ್ತಾನೆ. ಕುದುರೆ ಯಿಡದು ಕಟ್ಟಿದ ರಾಜನ ಜೊತ್ಯಾಗೆಲ್ಲ ಕುಸ್ತಿ ಮಾಡಿ ಕಪ್ಪ ಕಿತ್ಕೊಂಡು ತೊಡೇಗೆ ತೋಡ ಕಟ್ಟಿಶಿಕಂಡು ಬರತಾನೆ. ಬಂದ ಮ್ಯಾಕೆ ತೋಡ ತಗೆದು ಯಗ್ಗಣ ಮಾಡತಾನೆ

ಯಗ್ಗಣ ಅಂದ್ರೆ ಅದು ಯಜ್ಞ! ಆಗ ಯಾರು ಏನ್ನ ಕೇಳಿದರೂ ಕೊಡತನೆ. ಅವತ್ತು ಎಲ್ರೂ ಮನೇಗೋಗಿ ಮನೀಕ್ಕೊಂಡ ಮ್ಯಾಕ್ಕೆ, ಯಿಸ್ವಾಮಿತ್ರ ಮೆಲ್ಲಗೆ ಅರೀಚೆಂದ್ರನ ಮಂಚದ ತಾಕ್ಕೆ ಬಂದು, ಕಿವೀಲಿ ಯೇಳತಾನೆ – ಯೇನೈಯಾ ಮಾರಾಜಾ, ಚೆಂದಾಗಿದ್ದೀಯಾ? ಮನೇಯೋರೆಲ್ಲಾ ಸುಖವಾಗಿದ್ದಾರಾ? ಅಂತ ಕೇಳತಾನೆ, ಆಗ ಮಹಾತ್ಮ ಅರೀಚೆಂದ್ರ ಅವರ ಪಾದಾ ತೊಳದ ನೀರನ ತನ್ನ ತಲೆ ಮ್ಯಾಗ ಚೆಲ್ಲಿಕೊಂಡು, ಆ ತಲೇನ ಅವರ ಪಾದದ ಮ್ಯಾಗೆ ಮಡಗಿ, ಕೈ ಮುಗದು, ಕ್ಯಾ ಚಾಯಿಯೇ ಸಾಮೀಜೀ ಅಂತ ಕೇಳಿದರೆ – ಆ ಕಳ್ಳರುಷಿ ಯೇಳತಾನೆ – ಏ ರಾಜಾ, ಒಂದು ದೋಡ ಆನೆಮ್ಯಾಗೆ ಒಬ್ಬ ಎಂಟಡಿ ಮನಶ್ಯ ತುದಿ ಬೆರಳಾಗ ನಿಂತು, ಒಂದು ಕವಡೇನ ಅಲ್ಲು ಕಚಕೊಂಡು ಮ್ಯಾಕ್ಕೆಸೆದರೆ ಅದು ಎಸ್ಟುದ್ದ ಮ್ಯಾಲಕ್ಕೋಗುತ್ತೋ ಅದನ್ನ ಅತ್ತರಿಂದ ಗುಣಿಶಿದರೆ ಅದು ಎಸ್ಟುದ್ದ ಆಗುತ್ತೋ ಅಸ್ಟೆತ್ತರ ವೊಸಾವೊಸ ಚಿನ್ನದ ರಾಸಿ ಕೊಡು, ಅಂತಂದ.

ಅರೀಚೆಂದ್ರ ಬಾರಿ ಸಾವಕಾರ. ಅವನ ತಾತ ಮುತ್ತಾದ ಮೋಸ್ತಾಗಿ ಮಡಗಿ ವೋಗಿದ್ರು. ಅವನ್ದೇನೋಗ್ಬೇಕು. ಆಗಲಿ ಸಾಮಿ ಕೊಟ್ಟೇಂದ. ಯಿಸ್ವಾಮಿತ್ರ ಸುಸ್ತಾದ. ಎಲಾ ಇವನ, ಕೊಡೋ ಅಂತಂದ್ರೆ ಕೊಟ್ಟೇ ಬುಡತಾನಲ್ಲ, ಅಂತ ಮೂಗಿನ ಮ್ಯಾಗೆ ಬೆರಳಿಟುಕೊಂಡು, ಯಪ್ಪಾ, ನನಗೇನೂ ಈಗಲೇ ಬ್ಯಾಡ. ನಿನ್ನ ತಾವೇ ಮಡೀಕಂಡಿರು. ಬೇಕಾದಾಗ ತರೀಸ್ಕೊಂತೀನಿ. ಇಲ್ಲಾ ನಾನೇ ಬಂದು ತಗಂಡೋಯ್ತೀನಿ. ಅಂತ ಯೇಳಿ ಅಂಗೇ ಓದ.

ಅಂಗಂತ ವೋಗಿಬುಟ್ಟ ಮ್ಯಾಕೆ, ಅರೀಚೆಂದ್ರ ಸೋಲಲಿಲ್ವಲ್ಲಾ ಅಂತ ಬಾಳ ಸಂಗಟ ಆಗತ್ತೆ ಯಿಸ್ವಾಮಿತ್ರಂಗೆ. ಆಮ್ಯಾಕೆ ಇನ್ನೊಂದು ಉಪಾಯ

ವುಲಿ ಚಿರತೆ ಆಂದಿ ಕಳ್ಳಿ ಸಿಂಹ ಸಿವಂಗಿ ತ್ಯಾಳ ನರಿ ಇಂತದು ಇನ್ನೂ ಎಷ್ಟೋ ಕೆಟ್ಟ ಜಂತುಗಳನ ವುಟ್ಟೇಸ್ಬುಟ್ಟು, ಅರೀಚೆಂದ್ರನ ರಾಜ್ಯದ ಮ್ಯಾಗೆ ಛೂ ಬಿಡತಾನೆ. ಅವು ವೋಗ್ತವೆ – ಪೈರು ದನ ಕರ ಮನಸ್ರು ಎಲ್ಲಾವುಗಳನ್ನೂ ಆಳುಮಾಡಿ ದೊಂಸಮಾಡಿ ಆಕಿಬಿಡುತವೆ.

ಆಮೇಕೆ ಜನಗಳೆಲ್ಲ ದೊರೆ ಮನೆ ಮುಂದೆ ವೋಗಿ ಕಾಮುನಬ್ಬ ಮಾಡುತಾರೆ. ನಮ್ಮದು ಬೆಳೆವೊಂದೂ ಉಳಿವಂಗಿಲ್ಲ. ದನಗೋಳನೆಲ್ಲ ತಿಂದಾಹಾಕಿ ಬುಟ್ವೊ, ಬಿತ್ತಿದ ಬೀಜ ವುಟ್ವೊವಂಗೇ ಇಲ್ಲ. ಏನಾರ ಮಾಡಿ ನಮ್ಮನ್ನ ಕಾಪಾಡಪಾ. ನೀ ಬುಟ್ಟೆ ಅಂತಂತಂದ್ರೆ, ನಾವೂ ನಿಮ್ಮಪ್ಪನಂಗೇ ತ್ರಿಸಂಕು ಆಗೋಗ್ತೀವಿ ಅಂದ್ರು

ಆದಕಂದ ದೊರೆ – ಅಂಗೇ ಆಗಲಿ ನನ್‌ಮಕ್ಕಳಾ. ನಾಳೆ ಬೈಸಾರಿ ಎಲ್ರೂ ಬುತ್ತಿ ಕಟಕಂಡು ಬೇಟೆಗೆ ಶಿದ್ದ ಆಗಿ ಬೇಟೆ ಆಡಾಕೆ ವೋಗಾನ. ಅಂದ. ಅಂಗೆನೆ ಮಾರನೇ ದಿನ ದೊರೆ ಜನ ಎಲ್ರೂ ಶೇರಿ ಬ್ಯಾಟೆ ಆಡಾಕೆ ವೋದ್ರು.

ಯಿಂಗೇ ಆಡತಾ ಇರಾವಾಗ, ಯಿಸ್ವಾಮಿತ್ರ ಸಾಕಿದ್ದು ಒಂದು ಅಂದಿ ಜನಗುಳನೆಲ್ಲ ತುಳದು ಗೋಳೆಬ್ಬರಿಶಿಕೊಂಡು ನುಗ್ಗಿಬಂತು. ಅದನ ನೋಡದೋನು ವಬ್ಬ ಜೇಡ ಅಂದಿ ಅಂದೀ ಅಂತ ವದರಕಂಡ ಆ ವದರಾಟ ಕೇಳಿ, ತಿರಗಾ ಇವರೆಲ್ಲಿ ಕಾಮುನಬ್ಬ ಮಾಡತಾರೋ ಅಂತ ರಾಜ ಒಂದು ಕೈಯಾಗ ಬಿಲ್ಲು ಬಾಣ ಯಿಡಕಂಡು, ಗೈರತ್ ಇದ್ರೆ ಬಾರೋ ಅಂತ ಅಂದೀನ ಕರದ. ಅಂದಿ ಗುರ್ ಅಂತು. ರಾಜ ಗುರ್ ಅಂತೀಯಾ ಅಂತಂದಿದ್ದೇ ನೋಡಿ ವಂದು ಮಡಗ್ದ ಅದಕ್ಕೆ. ಆವಾಗ ಗರಳಗೊರಳಪನರಳಸರುಳಂಗೆ ಮುಸಿಪಂತೆ ಇರುಳ ತಿರಳಿನ ಹೊರುಳಿಗಾತರುಣಿ ಕಳ್ವಂತೆ (ಮುಂದಕ್ಕೆ ಪದ್ಯ ಮರತೋಗದೆ) ಅಂದಿ ತಿಗ ಮುಚಕಂಡು ಕಾಡಿಗೆ ಓಡತು. ದೊರೆ ಅದನ ಬಿಡನಿಲ್ಲ. ಅದು ವುಚ್ಚಿಕಂಡು ಓದ ವಾಶನೇನೆ ಯಿಡದು ಅದರಿಂದೇನೆ ಅಟ್ಟೆಶಿಕಂಡು ವೋದ.

ವೋಗ್ತಾ ವೋಗ್ತಾ ಯಿಸ್ವಾಮಿತ್ರನ ಆಸ್ರಮ ಸಿಕ್ತು. ಅಲ್ಲೀದು ಪ್ರಕೃತಿ ಸೌಂಧರ್ಯ ಭೋ ಪೋಕಾಗಿತ್ತು. ಮಂತ್ರಿ ಅದನ ನೋಡಿದೋನು – ಬುದ್ಧೀ, ಇಲ್ಲೇ ತಾವು ಚಂದಾಗದೆ, ಜಾಂಡಾ ಆಕಿಬಿಡಾನ ಅಂತಂದ. ಆಂಗಂದು, ದೊರೇನ ಕುದುರೇಂದ ಇಳಿಶಿ, ಕುದುರೆ ಬಾಯಿಗೆ ವುಲ್ಲು ಆಕಿ, ನೀರು ಕುಡಿಶಿ,

ದೊರೆಗೆ ಸ್ನಾನ ಮಾಡಿಶಿ ಮೈತೊಳದು ವೂಟಾ ಮಾಡಿಶಿದ ಆಮ್ಯಾಕೆ ಮಂತ್ರಪ್ಪ ಸ್ನಾನಕ್ಕಿಳಿದ. ದೊರೆ ಅಂಗೇ ಮೆತ್ತಗೆ ತೂಕಡಿಸಕ್ಕೆ ಸುರುಮಾಡಿದ.

ರಾಜ ಯಿಂಗೆ ಬಂದು ಮನೀಗವನೆ ಅನ್ನಾದು ಕಳ್ಳಕೊರಮ ಯಿಸ್ವಾಮಿತ್ರಂಗೆ ಪತ್ತೆ ಆಗೋಯ್ತು. ಆಗ ಅವನೇನು ಮಾಡಿದ – ಇದ್ದಕಿದ್ದಂಗೆ ಯಿಬ್ಬರು ವೊಲೇಗ ವುಡಗೀರನ್ನ ವುಟ್ಟಿಶಿಬುಟ್ಟು, ನೀವು ವೋಗಿ ಏನಾರಾ ಮಾಡಿ ಆ ಅರೀಚೆಂದ್ರನ್ನ ಕೆಡೀಶಿಬಾಡಬೇಕಲ್ಲಾ ಅಂತ ಆವರ ಕಾಲಿಡಕಂಡು ಕೇಳಿಗಂಡ.

ಅದಕೆ ಅವರು ಏನು ಮಾಡಿದರು ಅನ್ನಾದನ್ನ ಈಗಲೆ ಯೇಳಾಕಿಲ್ಲ – ಮುಂತಿನ ದಫ ಯೇಳಿ ಮುಗಸತೀನಿ.

# ಮದನಕ್ಕೆ ವಿಗ್ರಹ

ನಾವು ಸ್ಕೌಟುಗಳು ಒಂದು ಸಲ ಬೇಲೂರಿಗೆ ಹೋಗಿದ್ವು, ನಮ್ಮ ಸ್ಕೌಟ್ ಮಾಸ್ಟರ್ ಜೊತೇಲಿ. ಅವರಿಗೆ ಕಿವಿ ಸ್ವಲ್ಪ ಮಂದ. ಬುದ್ಧಿ ಚುರುಕು ಅಂತ ಹೇಳುತಾ ಇದ್ದರಂತೆ ಅವರ ತಾಯಿ, ಅವರು ಚಿಕ್ಕವರಾಗಿ ದ್ದಾಗ. ಅವರು ಅಂದರೆ ಅವರೇನೋ, ಅಥವಾ ಅವರ ತಾಯೀನೋ ಅಂತ ಕೇಳಿ, ಸದ್ಯಕ್ಕೆ ಮಾನ ತೆಗೀಬೇಡಿ. ಅಂ! ಯಾರ ಮಾನ ಅಂತೀರಾ?

ಹೇಳ್ತಾ ಇದ್ದೆ, ಬೇಲೂರಿಗೆ ಟ್ರಿಪ್ ಹೋಗಿದ್ವು ಅಂತ. ಕ್ಯಾಂಪಿನ ಕೂಳು, ಕೇಳಬೇಕೆ? ಆ ಟ್ರಿಪ್ಪಿಗೆ ಎಷ್ಟು ಪುದುವಟ್ಟೋ ಅಷ್ಟಕ್ಕೆ ಸರಿಯಾಗಿ, ಅನ್ನ ನೋಡಿ ಹೊಟ್ಟೆ ಚಾಚಿ, ಅಂದ್ರು ನಾವೂ ಹೋದವರೆಲ್ಲಾ, ನೋಡೋ ಕೇನೋ ಸಣ್ಣಗೆ ಸಣಕಲಾಗಿದ್ರೂ, ಒಬ್ಬೊಬ್ಬನ ಹೊಟ್ಟೇನೂ ಒಂದೊಂದು ಗುಡಾಣ. ಮೇಲೆ ನೋಡೋಕೆ ಏನೂ ಕಾಣತಾ ಇರಲಿಲ್ಲ ಆದರೆ ಹಗೇವಿಗೆ ಹಾಕಿದ ಅಂದರೆ, ಹಾ ಅನ್ನೋದರೊಳಗೆ ಹಾಕಿದ್ದು ಭಸ್ಮ! ಹಾಗಾಗಿ, ನಾವು ಯಾವೂರ್ನಲ್ಲಿ ಹೋಗಿ ಕ್ಯಾಂಪ್ ಮಾಡಿದರೂ, ನಾವು ಊರುಬಿಟ್ಟ ಮಾರನೆಯ ದಿವಸ, ಆ ಊರಿನವನು ಯಾವನಾದರೂ ಹೋಟಲಿನವನು ತನ್ನ ಸೂರಿಗೆ ಹಳ್ಳಿ ಹೆಂಚು ತೆಗೆಸಿ, ಮಂಗಳೂರು ಹೆಂಚು ಹಾಕಿಸಿರೋವನು! ಇಲ್ಲದೆ ಹೋದರೆ, ಮೈಸೂರು ದೋಸೆ ಮಾಡೋದು ನಿಲ್ಲಿಸಿ, ಬೊಂಬಾಯಿನ ಚಪಾತಿ ಮಾಡೋವನು—ಮಾರೋಕಲ್ಲ, ತಾನು ತಿನ್ನೋಕೆ.

ಬೇಲೂರಲ್ಲೂ ಹಾಗೇ ಆಯಿತು. ಅಂದರೆ ಹಳ್ಳಿ ಹೆಂಚು ಕಳಚಿ ಮಂಗಳೂರು ಹೆಂಚು, ಮೈಸೂರು ದೋಸೆಗೆ ಬದಲು ಬೊಂಬಾಯಿ ಚಪಾತಿ ಆಯಿತು ಅಂತ ಅಲ್ಲ—ನಮಗಂತೂ ಯಥಾಪ್ರಕಾರ ಕ್ಷೌರ ಆಗೋದು ತಪ್ಪಲಿಲ್ಲ. ಹೋಟಲಿಗೆ ಹೋದದ್ದೇ, ಒಲೆ ಮುಂದೆ ಕೂತದ್ದೇ, ದೋಸೆ

ಹಾಕಿಸಿದ್ದೇ. ಬೆಳಗ್ಗೆ ಅಷ್ಟು ಹೊತ್ತಿಗೇನೇ, ನಮ್ಮ ಭುಜಂಗನೇ ಹೋಗಿ ಹಿಟ್ಟು ತಿರುವಿಕೊಟ್ಟು ಬಂದಿದ್ದನಂತೆ! ನಾವು ಎಷ್ಟೇ ಆದರೂ – ಏಕೆ ಹೇಳ ಬೇಕು? ಎರಡೆರಡು ಖಾಲಿ, ಎರಡೆರಡು ಬೆಣ್ಣೆ, ನಾಕುನಾಕು ಚಟ್ನಿ, ಸ್ಯಾಂಪಲ್ ಪಲ್ಯ – ಮೂರು ಮೂರು ಸಲ, ನಾಕು ನಾಕು ಸಲ ತಿಂದದ್ದೇ ತಿಂದದ್ದು, ಜೇಬಿನಲ್ಲಿದ್ದ ಚಿಲ್ಲರೆ ಎಣಿಸಿಕೋತಾ, ಎಣಿಸಿಕೋತಾ.

ನಮ್ಮ ಜೊತೇಗೊಬ್ಬ ಬಂದಿದ್ದ. ಅವನ ಹೆಸರು ಹೇಳಿದರೆ ಯಾರಿಗೂ ಗೊತ್ತಾಗೊಲ್ಲ. ಅಡ್ಡ ಹೆಸರು ಹೇಳಿದರೆ ಬೇಗ ಗೊತ್ತಾಗುತ್ತೆ. ರೋತಿ ಅಂತ ನಾವು ಅವನ್ನ ಕೂಗತಾ ಇದ್ದದ್ದು. ಅವನೂ ಬಂದನಪ್ಪ ಅದೇ ಹೋಟಲಿಗೆ. ನಾವು ಬಂದ ಹಾಗೆ ವೇಳೆಗೆ ಸರಿಯಾಗಿ ಬರಬಾರದೆ? ಮೆರವಣಿಗೆಯೆಲ್ಲಾ ಮುಗಿದ ಮೇಲೆ ಮತಾಪಿನವನು ಬಂದ ಅಂತ ಕೈಲಾಸಂ ಹೇಳಿದ ಹಾಗೆ – ಬಂದ ಅವನು ಬರೋ ಹೊತ್ತಿಗೆ ಆ ಹೋಟೆಲು ಭಟ್ಟ ಕಾವಲಿ ಕೆಳಗಿಳಿಸಿ ಬೆಂಕಿ ಆರಿಸಿದ್ದ. ಆ ಒಲೇಲಿ ಉರಿ ಇಲ್ಲದ್ದನ್ನು ನೋಡಿದನೋ ಇಲ್ಲವೊ – ನಮ್ಮ ರೋತೀಗೆ ಹೊಟ್ಟೇಲಿ ಉರಿ ಹತ್ತಿಕೊಂಡಿತು.

ಉರೀತಾ ಉರೀತಾನೇ ಕ್ಯಾಂಪಿಗೆ ಬಂದ. ಯಾರ ಮೇಲೆ ತೀರಿಸಿ ಕೊಳ್ಳೋದು ಈ ಉರೀನ? ಚಾಡಿ ಹೇಳಿದ, ಸ್ಕೌಟ್ ಮಾಸ್ಟರಿಗೆ. "ಸಾರ್, ಯಾರೋ ಸ್ಕೌಟುಗಳು, ಹೋಟಲಿಗೆ ಹೋಗಿ, ಬೇಯಿಸಿದ ಹಿಟ್ಟನ್ನ ಹೊಟ್ಟೆಗೆ ಇಳಿಸಿಕೊಂಡು, ಹೋಟಲಿನವನ ಮುಃಖಕ್ಕೆ ನಾಮ ಬಳಿದುಬಿಟ್ಟು ಬಂದಿದಾ ರಂತೆ. ಆ ಹೋಟಲಿನವನು ಎರಡೂ ಕೈಲೂ ಬೋಲ್‌ಬೋಲ್‌ತರಂಗ್ ಬಾರಿಸ್ತಾ ಇದ್ದ" ಅಂತ ಚಾಡಿ ಹೇಳಿದ.

ನಮ್ಮ ಸ್ಕೌಟ್ ಮೇಷ್ಟರಿಗೆ ಕಿವಿ ಸ್ವಲ್ಪ ಮಂದ ಅಂದೆನಲ್ಲ – ತಪ್ಪು, ಅದನ್ನ ಹಿತ್ತಾಳೆ ಅಂತ ತಿದ್ದಿಕೊಳ್ಳಿ. ನಾನಾಗಿದ್ದಿದ್ದರೆ ಏನು ಮಾಡ್ತಾ ಇದ್ದೆ – ನಂ ರೋತಿ ಹೇಳಿದ ಮಾತು ನಿಜಾನೋ ಸುಳ್ಳೋ ನೋಡಬೇಕಾದರೆ, ಆ ಹೋಟಲಿನವನ ಮುಖದ ಮೇಲೆ ನಾಮ ಬಳಿದಿತ್ತೇ ಅಂತ ಹೋಗಿ ಮೊದಲು ನೋಡ್ತಿದ್ದೆ. ಅಲ್ಲಿ ಅದು ಇಲ್ಲದೆ ಹೋಗಿದ್ದರೆ, ನಾಯಿ ನೆಕ್ಕಿಕೊಂಡು ಹೋಯಿತಾ ಅಂತಾನಾದರೂ ಕೇಳದೆ ಇರುತ್ತಿರಲಿಲ್ಲ. ಒಂದು ವೇಳೆ ಅವನಿಗೆ ಕೋಪ ಬಂದು, "ಇಲ್ಲಾ. ನಿಮ್ಮ ಹುಡುಗರು ಬಂದು, ಕಾಸು ಕೊಡದೆ ಹೋದದ್ದು ಮಾತ್ರ ಅಲ್ಲ, ನಮ್ಮ ದೋಸೆ ಕಾವಲೀನೇ ಕಿಲೀನಾಗಿ ನೆಕಿ,

ಕೊಂಡು ಹೋದರು" ಅಂತ ಅಂದಿದ್ದರೆ, ಆಗ ತಿಳೀತಿತ್ತು ಅಳಿಯನ ಕಣ್ಣು ಕುರುಡು, ಅಥವಾ ಜೋಯುತ್ತಿತ್ತು ಅವನ ಬೇಳೀಕಾಳು.

ನಮ್ಮ ಸ್ಕೌಟ್ ಮಾಸ್ಟರು ಏನು ಮಾಡಿದರು, ಗೊತ್ತೆ? Fall in ಅಂದ್ರು. ಇದ್ದದ್ದು ಇದ್ದ ಹಾಗೆ, ಚೆಡ್ಡಿ ಅಂದರೆ ಚೆಡ್ಡಿ, ದಟ್ಟಿ ಅಂಗರೆ ದಟ್ಟಿ, ಟವಲು ಅಂದರೆ ಟವಲು, ಎಲ್ಲಾ ಹಾಗೆ ಹಾಗೇ ಸಾಲುಸಾಲಾಗಿ ನಿಂತೆವು.

"ಹೋಟಲಿಗೆ ಹೋಗಿದ್ದವರಲ್ಲಿ ಯಾರು ಯಾರು ಕಾಸು ಕೊಡದೆ ಕದ್ದು ತಿಂದು ಬಂದವರು?" ಎಂದು ಗರ್ಜಿಸಿದರು.

ಕೊಡದೆ ಇದ್ದವರು ಯಾರು? ಯಾರೂ ಕಂ ಕಿಂ ಎನ್ನಲಿಲ್ಲ.

"ಹೇಳೊಲ್ಲ ಅಲ್ವೆ? ನಾನು ಕಂಡುಹಿಡೀತೇನೆ. ನನ್ನ ಏನಂತ ತಿಳ ಕೊಂಡಿದೀರಿ?" ಅಂತ ನಮ್ಮ ಮೇಷ್ಟರು "ಬನ್ನಿ, ಒಬ್ಬೊಬ್ಬರಾಗಿ ಹೇಳಿ: On my honour, I have paid up all the ಕಾಸು I was due to the ಹೋಟಲು ಭಟ್ಟ for all the ದೋಸೇಸ್ I have eaten ಅಂತ ಹೇಳಿ" ಅಂದರು.

ನಾವು ಒಬ್ಬೊಬ್ಬರೂ ಎದೆ ಮೇಲೆ ಕೈಯಿಟ್ಟುಕೊಂಡು, 'On my honour', 'On my honour' ಅಂತ ಗುರುವಿಗೆ ತಿರುಮುಂತ್ರಾನ ತಿರುಗೂ ತಿರುಗೂ ಒಪ್ಪಿಸಿದೆವು.

ನಾವೇನೋ "ದನ ತಿನ್ನೋವನಿಗೆ ಗೊಬ್ಬರದಾಣೆ" ಅನ್ನೋ ಹಾಗೇ ಬಿಟ್ಟ ಚಟ್ಣ ತಟ್ಟೇ ತಟ್ಟೇ ಲಪಟಾಯಿಸೋವರು, ಕಾಸಿಲ್ಲದೆ ದೋಸೆ ತಿಂದು ಬಂದಿದ್ದರೂ 'On my honour' ಎಂದು ಬಾಬಯ್ಯನ ಮೇಲೆ ಆಣೆ ಬೇಕಾದರೂ ಇಟ್ಟು ಭಿರ್ಕಾ ಬಿಡೋವರು. ಆದರೆ ಇವತ್ತು ಎಲ್ಲರೂ ಕಾಸು ತೆತ್ತೇ ಖಾಲಿದೋಸೆ ಖಾಲಿ ಮಾಡಿದವರು. ನಮಗೆ ಯಾಕೋ ಬಲೆ ಇದಾಗಿ ಹೋಯಿತು.

ನಮ್ಮ ಸ್ಕೌಟ್ ಮೇಷ್ಟರಿಗೂ ಏನೂ ಇದಾಗದೆ ಇರಲಿಲ್ಲ. "ಎಲಾ, ಹೈಕಳು ನೀವು, ಮಟ್ಟೆ ತೋರಿಸಿದ ನನಗೆ ಮಣ್ಣು ಮುಕ್ಕಿಸ್ತೀರಾ? ಬನ್ನಿ, ಬನ್ನಿ, ಬಾಯಿ ಬಿಡಿಸ್ತೇನೆ" ಅಂತ ನಮ್ಮನ್ನೆಲ್ಲಾ ಹಾಗೆಹಾಗೇನೆ ಚೆಡ್ಡಿ ಸಮೇತ, ದಟ್ಟಿ ಸಮೇತ, ಟವಲ್ ಸಮೇತ ಹಿಂಬಾಲಿಸಿಸ್ಕೊಂಡು ಹೋಗಿ,

"ಎಲ್ಲಿ? ಲಾಷ್ ಎಲ್ಲಿ? ಸಾಬೀತಾಗ್ಬೇಕು" ಅಂತ ಪೋಲೀಸ್ ಇನ್‌ಸ್ಪೆಕ್ಟರ್ ಕೇಳೋ ಹಾಗೆ, ಆ ಭಟ್ಟರನ್ನ ಕೇಳಿದರು.

ಅದಕ್ಕೆ ಭಟ್ಟರು "ಸ್ವಾಮಿ, ಸುಳ್ಳು ಹೇಳಿದರೆ ನನ್ನ ಒಲೆ ಉರಿದು ಹೋಗಲಿ, ನನ್ನ ಕಾವಲಿ ಕಾದುಹೋಗಲಿ, ನನ್ನ ದೋಸೆ ತೂತು ಬೀಳಲಿ." ಅಂತ ಆಣೆ ಮೇಲೆ ಆಣೆ ಇಟ್ಟುಕೊಂಡು, ತನ್ನ ಅವ್ರೊತ್ತಿನ ಸಂಪಾದನೇನೆಲ್ಲಾ ಎಣ್ಣೆ ಡಬ್ಬದಿಂದ ಕೈಗೆ ಸುರುವಿಕೊಂಡು, "ನೋಡಿ, ಇಲ್ಲಿದೆ – ಹುಡುಗರ ಪುಡಿಕಾಸೆಲ್ಲಾ. ಬರಬೇಕಾದ್ದೆಲ್ಲ ಬಂದಿದೆ ಅಂತ ಬರಕೊಡು ಅಂದ್ರೆ, ಬರ ಕೊಡೋಕೂ ಸಿದ್ಧ. ಆದರೆ ಕೈಮಾತ್ರ ಜಿಡ್ಡು" ಅಂತ ಕೈ ತಲೆಗೆ ಒರಸಿ ಕೊಳ್ತಾ ಅಂದರು.

ನಂ ಮೇಷ್ಟು – ಅವರ ಹೆಸರು ಹೇಳಿಬಿಡತೇನೆ, ವಾಮನಮೂರ್ತಿ ಅಂತ–ಅದುವರೆಗೆ ಕೂರ್ಮನ ಹಾಗೆ ಕೋಪದ ಕಾಲು ತಲೆ ಎಲ್ಲಾ ಒಳಗಿಟ್ಟು ಕೊಂಡಿದ್ದೋರು ಈಗ ಒಂದು ನರಸಿಂಹ ಹಾಗೆ ಕೋರೆ ಬಿಟ್ಟರು! ಉಗುರು ನೀಡಿದರು! ನಾವು ಭೂಪತಿಗಳು ನಿಶ್ಚಿಂತೆಯಿಂದಿದ್ದರೂ ನಮ್ಮ ರೋತಿ, ಪಾಪ, ರಂಗು ಇಳಿದುಹೋಗಿಬಿಟ್ಟ.

ನಮಗೆ ರೋತಿ ಮೇಲೆ ಏನೂ ರೇಗು ಬರಲಿಲ್ಲ. ಅವನಂತೂ ಹೇಳಿ ಕೇಳಿ ಎಳೇ ನಿಂಬೇಕಾಯಿ ಆದರೆ, ಈ ಬಲಿತ ಮೇಸ್ಟರು ಇವರ್‍ಯಾಕೆ ಕೆಂಡು ಕಿತ್ತಳೆ ಆಗಬೇಕು? ಹೇಳೋವನು ಎಬ್ಬಂಕ ಆದರೆ, ಕೇಳೋವರು ಎಡವಟ್ಟು ಆಗಬೇಕಾ? 'ಕೊಡಬೇಕು ಇವರಿಗೆ ಬತ್ತಿ' ಎನ್ನಿಸಿತು.

ಮಧ್ಯಾಹ್ನ ದೇವಸ್ಥಾನಕ್ಕೆ ಹೋಗಿ ತಿರುಗುತಾ ಇದ್ದಾಗ, ಇವರಿಗೆ ಕೈಕೊಡೋಕೆ ಇದು ಸರಿಯಾದ ಬತ್ತಿ ಎನ್ನಿಸಿತು. ಮೆಲ್ಲಗೆ ಹಾಗೇ ಪಕ್ಕದ ಇನ್ನೊಬ್ಬನಿಗೆ ಹೇಳಿದೆ: "ಲೋ! ದೇವಸ್ಥಾನದ ಒಂದು ಮದನಕೈ ವಿಗ್ರಹಾನ ಯಾರೋ ಸ್ಕಾಟು ಜೇಬಿಗೆ ಇಳಿಬಿಟ್ಟದಾನಂತೆ – ಹಾಗಂತ ಭಟ್ಟರು ಗಂಟೆ ಬಜಾಯಿಸ್ತ, ಊರಲೆಲ್ಲ ಡಂಗುರ ಹಾಕಿಸ್ತಾ ಇದ್ದರು – ಅಂತ ಮೆಲ್ಲಗೆ ಒಂದು ಗುಸುಗುಸು ಹಚ್ಚಿಬಿಡು, ಮಾಸ್ಟರ ಕಿವಿಗೂ ಮುಟ್ಟಬೇಕು – ಈ ಚಕ್ರಬತ್ತಿ" ಎಂದೆ.

ನಾನು ಅಂದರೆ ಹೇಳಬೇಕೆ? ನಮ್ಮ ಹುಡುಗರು ಅಂದರೆ ಕೇಳಬೇಕೆ? ನಮ್ಮ ಸ್ಕಾಟ್ ಮೇಷ್ಟರಂತೂ ಹೇಳಬೇಕಾದ್ದೂ ಇಲ್ಲ, ಕೇಳಬೇಕಾದ್ದಂತೂ

ಮೊದಲೇ ಇಲ್ಲ. ಸರಿ, ಯಥಾಪ್ರಕಾರ, ಮಧ್ಯಾಹ್ನದ ಹಾಗೇ. Fall in! ಕಣ್ಣಿಂದ ಹುಡುಕಿದರು ನಿಕ್ಕರ್ ಜೇಬಲ್ಲಿ. ಕೈಯಿಂದ ತಡಕಿದರು ಷರಟು ಜೇಬಲ್ಲಿ. "ಯಾರು ತಗೊಂಡಿದೀರಿ. ನಿಜ ಹೇಳಿಬಿಡಿ ಬಿಟ್ಟುಬಿಡತೀನಿ" ಅಂದ್ರು. ಏನನ್ನ ಅಂತ ಅವರೂ ಹೇಳಲಿಲ್ಲ, ನಾವೂ ಕೇಳಲಿಲ್ಲ. On my honour ಹೇಳಿಸಿದರು – ಮದುವೇಲಿ ಪ್ರವರ ಹೇಳಿಸುವ ಹಾಗೆ. ಆದರೂ ಆ ಮೇಷ್ಟ್ರು....ಜಪ್ಪಯ್ಯ ಅಂದರೂ ನಂಬಬೇಕಲ್ಲ ನಮ್ಮನ್ನ!

ಮುಂದಕ್ಕೆ ಇನ್ನೂ ಏನ್‌ಮಾಡ್ತಿದ್ದರೋ ಏನೋ – ಅಷ್ಟು ಹೊತ್ತಿಗೆ ಅರ್ಚಕರೇ ಅಲ್ಲಿಗೆ ಏಕೋ ಬಂದರು. ಗೋವಿನ ಕಥೆಯಲ್ಲಿ "ಬಂದು ಬಳಸಿ ಅಡ್ಡಗಟ್ಟಿ ನಿಂದನಾ ಹುಲಿರಾಯನು" ಅಂತ ಬರೋದಿಲ್ಲವೇ ಹಾಗೆ, ನಮ್ಮ ಮೇಷ್ಟರು ಮೈ ಬೀಸಿಕೊಂಡು ಹೋಗಿ, ಆ ಅರ್ಚಕರನ್ನ ಅಡ್ಡಗಟ್ಟಿ, ಕೇಳಿಯೇ ಬಿಟ್ಟರು: "ಏನು ಭಟ್ಟರೆ, ಯಾವ ಮದನಕ್ಕೆ ವಿಗ್ರಹ missing ಉ?" ಅಂತ.

ಭಟ್ಟರು ಬೊಚ್ಚುಬಾಯಲ್ಲಿ ನಗು ತುಳುಕಿಸುತ್ತ ಹೇಳಿದರು: "ಹಾಗಂತ ಯಾರೋ ಹೇಳಿಕೊಂಡರು ಅಂತ ಕೇಳಿದೆ. ಯಾರದು ಈ ಚೇಷ್ಟೆ? ಮದನಕ್ಕೈ ಅಂದರೆ ಏನಂಥ ಲಘೂನೇ ಸ್ವಾಮಿ? ಅಲ್ಲ, ಆ ಕಂಬದ ಮೇಲಿನ ಮೂಲೇಲಿ ಇವೆ ನೋಡಿ–ಐದೈದು ಅಡಿ, ಮೂರು ಮೂರು ಅಡಿ ಎತ್ತರ–ಅಗಲ–ಅದನ್ನ ಲಪಟಾಯಿಸಿಕೊಂಡು ಹೋಗೋದು ಹೇಗೆ?"

ನಮ್ಮ ಮೇಷ್ಟರು ಎಷ್ಟಾದರೂ ನಮ್ಮ ಮೇಷ್ಟರೇ! "ಲ್ರೋ! ನನಗೇ ಚೆಳ್ಳೇ ಹಣ್ಣು ತಿನ್ನಿಸ್ತೀರಾ ನೀವು? ಇರಲಿ. ನಾಳೆ ಬೆಳಗ್ಗೆ ಕ್ಯಾಂಪಿನಲ್ಲಿ ನಿಮಗೆ ತಲಾ ನಾಕು ನಾಕು ಸಾದಾ ದೋಸೆ ತಿನ್ನಿಸದೆ ಹೋದ್ರೆ, ಮಧ್ಯಾಹ್ನ ಇನ್ನೊಂದು ಸಲ ಈ ದೇವಸ್ಥಾನ ಸುತ್ತಿಸದೇ ಹೋದರೆ, ನನ್ನ ಹೆಸರು ವಾಮನ ಮೂರ್ತಿ ಅಲ್ಲವೇ ಅಲ್ಲ!" ಅಂದರು.

ಮಾರನೆಯ ದಿವಸ ನಮಗೆ ಹಾಗೇ ಶಿಕ್ಷೆ ಆಯಿತು. ಸಂತೋಷದಿಂದ ಅದನ್ನ ಅನುಭವಿಸಿದೆವು.

# ಹಲೋ!....ನಾನು!....ಶೈಲಾ!

ಹಲೋ!....ಯಾರು?....ಪುಷ್ಪಾನಾ?

ಹಲೋ!....ನಾನು!. ..ಶೈಲಾ!. ಶೈಲಜಾ ಕಣೇ!

ಅಲ್ವೇ! ನಮಗೆ ಹ್ಯಾಗೇ ಗೊತ್ತಾಗಬೇಕು, ಅವರು ನಿನ್ನ ಗಂಡ ಅಂತ! ಇಲ್ಲೇ ಊರಲ್ಲಿ ಮದುವೆ ಮಾಡಿಕೊಂಡರೆ ನಮಗೆಲ್ಲ ಊಟ ಹಾಕಿಸ ಬೇಕಾಗುತ್ತೆ ಅಂತ ಯಾವುದೋ ಹಳ್ಳೀಲಿ ಹೋಗಿ ಹಾರ ಬದಲಾಯಿಸಿ ಕೊಂಡಿದ್ದೀಯ?....

ನೋಡಮ್ಮ, ನಡೆದದ್ದು ಇಷ್ಟೆ: ಶುಕ್ರವಾರ ಫಸ್ಟ್ ಪೀರಿಯಡ್ ತಾನೇಮ್ಮ, ಇಂಗ್ಲಿಷ್ ಪಾಠ. ಹೊಸ ಮೇಷ್ಟ್ರು, ಈ ವರ್ಷ ತಾನೆ ಸರ್ವಿಸ್ಗೆ ಸೇರಿದವರು ಅಂತ ಗೊತ್ತಾಯ್ತು. ,ಸ್ವಲ್ಪ ಚಿಡಾಯಿಸೋಣ ಅನ್ನಿಸ್ತು. ನಿನ್ನ ಗಂಡ ಅಂತ ನಾವೇನು ಕನಸು ಕಾಣಬೇಕಾಗಿತ್ತೇನೆ?....

ನೋಡೆ, ಪೂವಿ. ಇಷ್ಟೇಮ್ಮ ನಡೆದದ್ದು: ನೆಲ ನೋಡತಾ ರೂಮೊಳಕ್ಕೆ ಬಂದ್ರು. "ಇದೇನಾ ಸೀನಿಯರ್ ಬಿ ಎ?" ಅಂತ ಕೇಳಿದರು, ಭೂಮಿ ತಾಯೀನ. ನಾವು ಆ ತಾಯಿ ಪರವಾಗಿ "ಹೌದು ಸಾರ್" ಅಂದೆವು. ಅವರು ಮೇಜಿನ ಹತ್ತಿರ ಬರೋ ಹೊತ್ತಿಗೆ ಸರಿಯಾಗಿ ಚಂಪಕಾ ಧಡೀರಂತ ಬಾಗಿಲು ಹಾಕಿಬಿಟ್ಟಳು....ಅಲ್ಲಮ್ಮಾ, ಹೊರಗಿನ ಗಲಾಟೇಂದ ನಮ್ಮ ಪಾಠಕ್ಕೆ ತೊಂದರೆ ಯಾಗೋದು ಬೇಡ ಅಂತ ನಾವು ಬಾಗಿಲು ಮುಚ್ಚಿದರೆ, ಈ ಮೇಷ್ಟರು ಯಾಕಮ್ಮ ಬೆಚ್ಚಬೇಕು? ಇವರಿಗೆ ಯಾಕೆ ನಡಕ ಅಂತೀನಿ? ಮತ್ತೆ ಮಾತು ಯಾಕೆ ತೊದಲು ತೊದಲಾಗಬೇಕು?....ನಾವೇನು ಮಾಡಿದ್ವೀಮ್ಮ?.... ಒಳ್ಳೇ ಚೆನ್ನಾಯ್ತು....

ಆಯ್ತಾ? ಅವೊತ್ತು ನಮಗಿದ್ದದ್ದು – ಪೊಯೆಟ್ರಿ. ಈ ಹೊಸಾ ಮೇಷ್ಟ್ರು ಎಡಗೈದು ನಾಕು ಬೆರಳನ್ನೂ ಮಡಿಚಿಕೊಂಡು, ಆ ನಾಕು ಬೆರಳಿನ ಉಗುರನ್ನೂ ಎಡಗೈ ಹೆಬ್ಬೆಟ್ಟಿನಿಂದ ಮಾಲೀಸು ಮಾಡುತಾ, 'ಡೆವಲಪ್ಮೆಂಟ್ ಆಫ್ ಇಂಗ್ಲಿಷ್ ಡ್ರಾಮ' ಅಂತ ಬಾಯಿಗೆ ಬಂದದ್ದು ಬುರುಡೆ ಬಿಡೋದೇನೆ"... ನಾವೇನು ಮಾಡಬೇಕು ? ಪೊಯೆಟ್ರಿ ಪುಸ್ತಕ ಇದೆ, ಪೊಯೆಟ್ರಿ ಪಾಠ ಮಾಡತಾ ಇಲ್ಲ. ಪಾಠ ಏನೋ ಮಾಡತಾ ಇದಾರೆ, ಆದರೆ ಅದು ನಮಗಲ್ಲ, ಅವರ ಎಡಗೈ ಬೆರಳಿನ ಉಗುರುಗಳಿಗೆ! .. ಇದು ಯಾಕೆ ಈ ಮೇಷ್ಟ್ರು ಹೀಗೆ? ಅಂತ ನಾವೆಲ್ರೂ ಗಪ್‌ಚಿಪ್ಪಾಗಿ ಅವರನ್ನೇ ನೋಡುತಾ ಕೂತುಬಿಟ್ವಿ! ಇದೂ ನಮ್ಮ ತಪ್ಪೇ ?....ಮತ್ತೇನು ಮಾಡಬೇಕಾಗಿತ್ತೇ ? ತೂಕಡಿಸ್ತಾ ಗೊರಕೆ ಹೊಡೀಬೇಕಾಗಿತ್ತೇನೊ!.. ..ಅವರು ನಿನ್ನ ಗಂಡ ಅಂತ ಗೊತ್ತಾಗಿದ್ದಿದ್ರೆ – 'ನಂ ಪುಷ್ಪಾ ಮೇಲೆ ಒಂದು ಲೆಕ್ಚರ್ ಹೇಳಿ ಸಾರ್' ಅಂತ ಕೇಳೇ ಬಿಡತಿದ್ದೆ ! . .

ಅದು ಸರೀಮ್ಮಾ. ನಾವೇನೋ ಸ್ಟೇರ್ ಮಾಡತಾ ಇದ್ದದ್ದು ತಪ್ಪು ಅಂತ ಬೇಕಾದರೆ ಒಪ್ಪಿಕೊಳ್ಳೋಣ. ಆದರೆ ಅವರು, ನಿನ್ನ ಯಜಮಾನರು, ಲೆಕ್ಚರ್ ಮಾಡತಾ ಮಾಡತಾ, ಮುಕ್ಕಾಲು ಗಂಟೆ ಪಂಜಾಬ್ ಮೆಯ್ಲ್ ಓಡಿಸಿ, ಥಟಕ್ಕನೆ ತಲೆಯೆತ್ತಿ ನಮ್ಮನ್ನ ಯಾಕಮ್ಮಾ ನೋಡಬೇಕು ?....ಹೋಗಲಿ, ನೋಡಲಿ. ನೋಡಿದವರು, ಯಾಕಮ್ಮಾ ನಿಷ್ಕಾರಣವಾಗಿ ಮುಖದ ತುಂಬ ಬೆವರು ಒರಿಸಿಕೊಳ್ಳಬೇಕು...ಅದೂ ಆಗಲಿ ಅಂದ್ರೆ, ಆ ಅವಾಂತರದಲ್ಲಿ ಮೇಜಿನ ಮೇಲಿದ್ದ ಡಸ್ಟರ್‌ನ ಯಾಕಮ್ಮಾ ಎತ್ತಿಕೊಳ್ಳಬೇಕು ? ನಾವುಗಾನಾ 'ಸಾರ್, ಡಸ್ಟರ್!' ಅನ್ನದೆ ಹೋಗಿದ್ರೆ, – ಆಗ್ತಿತ್ತು ಅವತ್ತು ಅವರಿಗೆ, ಮುಖದ ತುಂಬ ಬಿಳೀ ನಾಮದ ಪಟ್ಟೆ!....

ಸದ್ಯ! ಅಷ್ಟು ಹೊತ್ತಿಗೆ ಗಂಟೆ ಹೊಡೀತೋ, ಬಚಾವಾದರು ಅನ್ನು....

ತಿರುಗೂ ಹೇಳ್ತೀಯಲ್ಲ! ನಮ್ಮದೇನೇ ತಪ್ಪು ?....ಪಾಠಕ್ಕೆ ಬಂದವರು, ಅಟೆಂಡೆನ್ಸ್ ಹಾಕದೆ ಹೋದರೆ ಹ್ಯಾಗೇ?....ಜ್ಞಾಪಿಸಿದೆವು....ಪೆನ್ ತೆಗೆದು, ರಿಜಿಸ್ಟರ್ ಬಿಚ್ಚಿ, ಹೆಸರು ಕೂಗಿದರು....ಅಂಬುಜಾ....ಅಮ್ಮಣ್ಣಿ...ಭಾಗೀರಥಿ... ಪಾಪ, ತಿರುಗೂ ಬೆವತುಹೋದರು ಕಣೆ....ನಮ್ಮದೇನೇ ತಪ್ಪಾ?....ಬೇಕಾದರೆ, ಮುಂದಿನ ವಾರದ ವೇಳೆಗೆ ಒಂದೊಂದು ಹೆಸರಿನ ಕೊನೆಗೂ ಒಂದೊಂದು

'ಅಮ್ಮ', ಒಂದೊಂದು 'ದೇವಿ', ಒಂದೊಂದು 'ಬಾಯಿ' ಸೇರಿಸೋಣ ವಂತೆ. ಇನ್ನೂ ಬೇಕು ಅಂದರೆ, ಒಂದೊಂದರ ಹಿಂದೇನೂ ಒಂದೊಂದು 'ಮಿಸ್ಸ', ಒಂದೊಂದು 'ಕುಮಾರಿ', ಒಂದೊಂದು 'ಶ್ರೀಮತಿ' ಬೇಕಾದರೂ ಸೇರಿಸೋಣ... ನೀ ಹೇಗೆ ಹೇಳಿದರೆ ಹಾಗೆ ಎಷ್ಟಾದರೂ ಅವರು ನೊದಲು ನಂಫ್ರೆಂಡಿಗೆ ಯಜಮಾನರು, ಆಮೇಲೆ ನಮಗೆ ಮೇಷ್ಟರು. ಎಷ್ಟೇ ಆದರೂ ಅವರು ನಿನ್ನ ಕಾಪಿರೈಟ್ ತಾನೇಮ್ಮ! ..

ಆಮೇಲೆ, ಪುಷ್ಪಾ! ರಿಜಿಸ್ಟರಲ್ಲಿ ಎಲ್ಲಾ ಹೆಸರ್ನೂ ಕರೀತಾ ಕರೀತಾ. .. ಹಾಗೋ ಹೀಗೋ .ಪದ್ಮಿನಿ, ಪಂಕಜ, ಪಾರ್ವತಿ ಅಂತ ಎಲ್ಲಾ ಕರೆದು. . ಬಂದರಮ್ಮಾ ಬಂದರು. .ನಿನ್ನ ಹೆಸರಿಗೆ ..ಬೇಡ, ಬೇಡಾ ಅವರ ಪಾಡು.... ಮೂರು ಸಲ ಪು-ಪು-ಪು-ಅಂದರು....ಅವರ ಒದ್ದಾಟ ನೋಡಲಾರದೆ ನಾನು 'ಪುಷ್ಪಾ ಆಬ್ಸೆಂಟ್ ಸಾರ್' ಅಂದೆ ...ಆಗ ನಮಗೆ ಅರ್ಥವಾಗಲಿಲ್ಲ, ಅದು ಯಾಕೆ ಹಾಗೆ ಒದ್ದಾಡಿದರು ಅಂತ. ..

ಹಲ್ಲೋ!....ಹಲ್ಲೋ! ಪುಷ್ಪಾ! ಅದು ಯಾರೇ ಈಗ ನಿನ್ನ ಜೊತೇಲಿ ನಕ್ಕದ್ದು? ಯಾರೋ ಗಂಡಸರು!

ಹಾ! ಏನಂದೆ?... ಮೇಷ್ಟ್ರೆ? ..ಅಯ್ಯಯ್ಯೋ! ...

ಮುಂದಿನ ವಾರ ಕ್ಲಾಸಿನಲ್ಲಿ ಕೊಶ್ಚನ್ ಕೇಳ್ತೀರಾ?....ಯಾರನ್ನ? ನನ್ನೇ?....ಷೆಲ್ಲಿ ಮೇಲೇ? ಅಯ್ಯಯ್ಯೋ!....

ಬಯ್ ಬಯ್ ಪುಷ್ಪಾ! ...ಅಲ್ಲ, ಸಾರ್!. ..ಅಯ್ಯಯ್ಯೋ!

# ಮೂರು ಕಾಗದ

## ೧. ಅವರು ತಮ್ಮ ಯಜಮಾನರಿಗೆ

. . .ಈ ಸಂಸಾರಾನೂ ಸಾಕು, ಈ ಸರಕಾರೀ ಚಾಕ್ರೀನೂ ಸಾಕು. ಇದೇನು ಹುಡುಗಾಟ? ಬೆಂಗಳೂರಂಥ ಷಹರ್ನಲ್ಲಿ-ಬಾಡಿಗೇಗೆ ಮನೆ ಸಿಕ್ಕದೆ—ನಾವು ಮೈಸೂರಲ್ಲಿ--ನೀವು ಬೆಂಗಳೂರಲ್ಲಿ—ಎರಡು ಸಂಸಾರ ನಿರ್ವಹಿಸೋಕೆ ಸಂಪಾದ್ನೆ ಎಲ್ಲಿಂದ ಬರಬೇಕೋ ದೇವರೇ ಬಲ್ಲ! ಸಾಲದ್ದಕ್ಕೆ ಮಧ್ಯೇ ಮಧ್ಯೇ ಈ ಹಬ್ಬಗಳು ಬೇರೆ—ಅವಸರದಲ್ಲಿ ಅಜ್ಜಿ ಏನೋ ಆದಳು ಅಂದ ಹಾಗೆ.

ನೋಡಿ, ಮುಂದಿನ ವಾರ ಗೌರೀಹಬ್ಬ. ಚಂಚೂನ ಕರಸ್ಕೊಬೇಡವೆ, ತವರುಮನೇಗೆ? ಆದರೆ ಅವಳ ಗಂಡನ್ಗೆ ಬಂದು ಬಿಟ್ಟು ಹೋಗೋ ಅಷ್ಟು ದಿನ ರಜ ಇಲ್ವಂತೆ. ಅದೂ ಅಲ್ಲದೆ, ಅವಳು ಬಂದುಬಿಟ್ಟರೆ, ಹೋಟೆಲಲ್ಲಿ ಅದೂ ಇದೂ ಹಾಳೂ ಮೂಳೂ ತಿಂದುಬಿಟ್ಟು, ಅವರಿಗೆ ಮೈ ಕೆಟ್ಟುಹೋಗುತ್ತೆ ಅಂತ ಅವಳೂ ಬರೋಲ್ವಂತೆ. ನಾನಾದರೂ ಹೋಗೋಣ ಅಂದ್ರೆ, ಐದನೇದಕ್ಕೆ ನೆನ್ನೇಂದ ಮೈಯಲ್ಲಿ ಏನೋ ಏಳ್ತಾ ಇದೆ. ಸೀತಾಳೇನೋ, ದಡಾರಾನೋ—ಏನೋ ಆ ಮಾರಮ್ಮಂಗೇ ಪ್ರೀತಿ.

ನೀವು ನೋಡಿ, ಹೇಗೂ ಬೆಂಗಳೂರಲ್ಲೇ ಇದೀರ. ತುಮಕೂರೇನೂ ನಿಮಗೆ ದೂರ ಅಲ್ಲ ಹಾಗೇ ಒಂದು ಹೆಜ್ಜೆ ನೀವೇ ಹೋಗಿಬಿಟ್ಟು, ಮಗೂಗೆ ಗೌರೀ ಹಬ್ಬಕ್ಕೆ ಏನಾದರೂ ಕೊಟ್ಬನ್ನಿ. ನಾವ್ತಾನೇ ಏನು ಕೊಟ್ಟೇವು? ಚಿನ್ನಾನೇ, ಚೈನೇ? ಸೀರೆ ಅಂದ್ರೆ, ಟ್ರಂಕ್ ತುಂಬ ಮಡಿಸಿ ಮಡಿಸಿ ಇಟ್ಕೊಂಡಿದಾಳೆ. ಇನ್ನೇನು ಬೆಳ್ಳಿ ಲೋಟ? ತಟ್ಟೆ? ಇರೋವರು ಇಬ್ಬರಿಗೆ ಈಗ ಅವರ ಹತ್ತಿರ ಇರೋದೇ ಸಾಕು. ಅಂತೂ ಯಾವುದಾದರೂ, ಏನಾ

ದರೂ, ನೋಡಿದಾಗಲೆಲ್ಲ ಅವರಮ್ಮನ ಜ್ಞಾಪಕ ಬರೋ ಹಾಗೆ, ಏನಾದರೂ ತೊಗೊಂಡುಹೋಗಿ ಕೊಟ್ಟುಬನ್ನಿ.

ನನ್ನ ನಿಮಗೆ ಕೊಟ್ಟು ಮದುವೆಯಾದ ಹೊಸದರಲ್ಲಿ, ನಿಮ್ಮ ಅತ್ತೆ ಮಾವ ನಿಮ್ಮನ್ನ ಏನೋ ಮಹಾ ಬುದ್ಧಿವಂತರು ಅಂತ ಮಾತುಮಾತಿಗೂ ಹೊಗಳಿ ಹಸೆಗೆ ಹಾಡಿಸಿ ಕರೀತಾ ಇದ್ದರಲ್ಲ—ಎಲ್ಲಿ ನೋಡೋಣ, ನಿಮ್ಮ ಬುದ್ಧಿವಂತಿಕೆ? ಚಂಚೂಗೆ ಬರೆದು ಕೇಳತೀನೆ, ಅದೇನು ಉಡುಗೊರೆ ಕೊಟ್ಟು ಬರ್ತೀರೋ ನೋಡೋಣ

## ೨. ಮಗಳು ತನ್ನ ತಾಯಿಗೆ

. .ಅಪ್ಪ ಬಂದಿದ್ದರು, ಹಬ್ಬದ ದಿವಸ ನೀನು ಒತ್ತಿ ಒತ್ತಿ ಬರೆದಿದ್ದೆ ಯಂತೆ—ಯಾವುದಾದರೂ, ಏನಾದರೂ, ನೋಡಿದಾಗಲೆಲ್ಲ ಅಮ್ಮನ ಜ್ಞಾಪಕ ಬರುವ ಹಾಗೆ ಎಂಥಾದಾದರೂ ತೆಗೆದುಕೊಂಡು ಹೋಗಿ ಕೊಟ್ಟು ಬಾ, ಅಂತ. ಆದರ ಹಾಗೆ, ನೀನು ಹ್ಯಾಗೆ ಹೇಳಿದರೆ ಹಾಗೆ ಕೇಳತೀನಿ ಅಂತ, ನೋಡಿದಾಗ ಲೆಲ್ಲ ನಿನ್ನ ಜ್ಞಾಪಕ ಬರೋ ಉಡುಗೊರೇನೇ ತಂದುಕೊಟ್ಟಿದ್ದಾರೆ. ಪ್ರತಿದಿನ ಸೊಪ್ಪು ಹಚ್ಚಬೇಕಾದರೆ, ತರಕಾರಿ ಹಚ್ಚಬೇಕಾದರೆ, ಇದರಿಂದ ದಿನಾ ನಿಮ್ಮಮ್ಮನ ಜ್ಞಾಪಕ ಆಗುತ್ತೆ ಅಂತ ಒಂದು ಒಳ್ಳೇ ಈಳಿಗೆಮಣೆ ತಂದು ಕೊಟ್ಟು ಒಂದು ಪುಟ್ಟ ಭಾಷಣ ಮಾಡಿದರು. ಬೆಳಗ್ಗೆ ಅಪ್ಪಾನೂ ಅವರೂನೂ ಏನೋ ಗುಸುಗುಸು ಮಾತಾಡ್ಕೊಂಡು ಒಳಗೊಳಗೇ ನಗುತಾ ಇದ್ದಾಗ, ಹೀಗೇ ಏನೋ ಮಾಡತಾರೆ ಅಂತ ನನಗೂ ಅನ್ನಿಸಿತ್ತು. ನಮಗನಕ ಮಧ್ಯಾಹ್ನ ದಿಂದ ನಕ್ಕೂ ನಕ್ಕೂ ನಕ್ಕೂ....ನಿಮ್ಮಮ್ಮನಿಗೆ ಇದನ್ನ ಬರಿ ಅಂತ, ಅಪ್ಪ ಇಲ್ಲೇ ಇದಾರೆ... ಅವರೂ ಇಲ್ಲೇ ಇದಾರೆ....

## ೩. ತಾಯಿ ತಮ್ಮ ಯಜಮಾನರಿಗೆ

ನಿಮಗೆ ವಯಸ್ಸಾದ್ದು—ದ್ದಂಡ!

# ನಗಬೇಕೋ? ಅಳಬೇಕೋ?

ಮೊನ್ನೆ ಕಬ್ಬನ್‌ಪಾರ್ಕಿನಲ್ಲಿ ಸಂಜೆ ಬಟಾಣಿ ತಿನ್ನುತ್ತ ಕುಳಿತಿದ್ದೆ. ಇಂಟರ್‌ಮೀಡಿಯೆಟ್ ಪರೀಕ್ಷೆ ಮುಗಿದು ಒಂದು ವಾರವಾಗಿತ್ತು.

ಕೂತು ಬಟಾಣಿ ತಿನ್ನತಾ ಇದೇನೆ....ಯಾವನೋ ಹುಡುಗ—ಹುಡುಗ ಏನು?—ಇಪ್ಪತ್ತೈದು ವರುಷ ಇರಬಹುದು—ಹತ್ತು ಹದಿನೈದು ಸಲ ನನ್ನ ಮೂಗು ಮುಂದೆ ಹಾಗೇ ಹಾದುಹೋದ. ನನ್ನ ಹತ್ತಿರ ಬರಬೇಕೇನೋ, ಏಕೋ ಬರುವುದಕ್ಕೆ ಸಂಕೋಚ ಎನ್ನುವ ಹಾಗೆ ಭಾಸವಾಯಿತು. ಯಾರೋ, ಕ್ಷಾಮಕ್ಕೆ ಬಲಿಯಾದವನೋ ಏನೋ, ನನ್ನ ಬಟಾಣಿ ನೋಡಿ ಬಾಯಿಬಿಡುತ್ತಿದ್ದಾನೋ ಏನೋ ಎನ್ನಿಸಿತು. ಆದರೆ ಅವನ ಮೈ ನೋಡಿದರೆ, ಹಾಗಿರಲಿಲ್ಲ. ಹತ್ತಿರ ಬಂದರೆ, ಹೋಟಲು ನಾಸನೆ ಹೊಡೆಯುತ್ತೆ ಎನ್ನುವ ಹಾಗಿತ್ತು.

ಕೊನೆಗೆ, ಅವನ ಆ ಹುಲಿಬೋನಿನ ಓಡಾಟ ನೋಡಿ ತಡೆಯಲಾರದೆ 'ಯಾರಪ್ಪ ನೀವು?' ಎಂದೆ. ಆಗ ಅದೇನಾಯಿತೋ ಅವನಿಗೆ, ಯಾವ ಆಣೆಕಟ್ಟು ಕಿತ್ತುಹೋಯಿತೋ ಕಾಣೆ, "ನಾನು ಸಾರ್!" ಅಂತ ವಿಕಾರವಾಗಿ ಕೂಗಿಕೊಂಡು, ಸಾಷ್ಟಾಂಗವಾಗಿ ನೆಲದ ಮೇಲೆ ಮಲಗಿ, ನನ್ನ ಎರಡು ಕಾಲುಗಳನ್ನೂ ಬಿಗಿಯಾಗಿ ಕಟ್ಟಿಕೊಂಡ. ಹಿಂದೆ ಒಬ್ಬ ಹುಚ್ಚ ಹೀಗೇ ಮಾಡಿ, ನನ್ನ ಕಾಲುಬೆರಳುಗಳನ್ನು ಕಡಿದುಬಿಟ್ಟಿದ್ದ. ಆದರೆ ಹಲ್ಲು ಅಗಿದೂ ಅಗಿದೂ ಅವನ ಹಲ್ಲೆಲ್ಲ ಹುಲ್ಲಿನ ಹಾಗೇ ಆಗಿಹೋಗಿತ್ತಾದ ಕಾರಣ, ನನ್ನ ಬೆರಳುಗಳಿಗೆ ಏನೂ ಜಖಂ ಆಗಲಿಲ್ಲ. ಅದು ಜ್ಞಾಪಕವಾಗಿ, ನನ್ನ ಎದೆ ಡವಡವಗುಡ ತೊಡಗಿತು.

ಆದರೂ ಧೈರ್ಯ ಮಾಡಿ, "ಯಾರಪ್ಪಾ? ಏಳಿ!" ಎಂದೆ. ಅವನು ಏಳದೆ ಹಾಗೇ ಮಣ್ಣಿನಲ್ಲಿ ಮೂಗಿನ್ಮನೇಗಿಲನ್ನು ಊರಿ ಉಳುತ್ತ, "ನಾನು ಸಾರ್,

ತಮ್ಮ ಶಿಷ್ಯ. ತಮ್ಮಿಂದ ವಿದ್ಯೆ ಕಲಿತ ತಮ್ಮ ವಿಧೇಯ" ಎಂದ ಇಂಥ ವಿದ್ಯೆಯನ್ನು ನಾನು ಯಾರಿಗೂ ಕಲಿಸಿಕೊಟ್ಟಂತೆ ನನಗೆ ಜ್ಞಾಪಕವಾಗಲಿಲ್ಲ.

"ಛಿ! ಏಳ್ರೀ ಮೇಲೆ. ಯಾರಾದರೂ ನೋಡಿದರೆ ಏನೆಂದುಕೊಂಡಾರು? ನಾನೂ ಮಕ್ಕಳು ಮರಿ ಇರೋವನು. ಏಳ್ರಿ!" ಅಂದೆ.

"ತಾವು ಅಭಯ ಕೊಟ್ಟ ಹೊರತು ನಾನು ಏಳೋದಿಲ್ಲ, ಸಾರ್!" ಅಂತ ಅವ ಮಲಗೇ ಇದ್ದ, ಆ ಮೊಂಡ.

ಅಭಯ ನೀಡಬೇಕಾಗಿದ್ದು ಅವನು, ನನಗೆ–ಕಚ್ಚೋಲ್ಲಾ ಅಂತ! ಅದು ಬಿಟ್ಟು ನನ್ನೇ ಬೇಡತಾ ಇದಾನೆ. 'ಏನೋ! ಹುಚ್ಚೋ ಹೇಗೋ!' ಎಂದು ಕೊಂಡು, "ತಕ್ಕೊಳ್ರೀ! ತಕ್ಕೊಳ್ಳಿ! ಇದೋ ನನ್ನ ಬಲಗೈ! ಅಭಯಹಸ್ತ! ಬೇಕಿದ್ರೆ ಇದೂ ತೆಕೊಳ್ಳಿ, ಎಡಗೈ! ವರದ ಹಸ್ತ!" ಅಂತ ಎರಡೂ ಕೈ ಮೇಲೆತ್ತಿದೆ.

(ನಿಜವಾಗಿ, ದೇವರು ಯಾವ ಕೈಲಿ ವರ ಕೊಡುತಾನೋ? ಇನ್ನೊಂದು ಸಲ ದೇವಸ್ಥಾನಕ್ಕೆ ಹೋದಾಗ ನೋಡಬೇಕು. ಅಲ್ಲಿಯ ವರೆಗೆ ನಮ್ಮ ದೇವಸ್ಥಾನಗಳಲ್ಲಿ ದೇವರುಗಳು ಹೀಗೇ ಇದ್ದರೆ!)

ಅವನಿಗೆ ಅಷ್ಟೇ ಆಶ್ವಾಸನೆ ಸಾಕಾದಹಾಗಿತ್ತು. ಇಂಥ ಅಲ್ಪತೃಪ್ತರೇ ಅಲ್ಲವೇ ಮಹಾಸುಖಿಗಳು! ಎಷ್ಟು ಬೇಗ ನೆಲದ ಮೇಲೆ ಬಿದ್ದನೋ ಅಷ್ಟೇ ಬೇಗ ನೆಲದಿಂದ ಎದ್ದು ಕುಳಿತ.

"ಕ್ಷಮಿಸಬೇಕು, ಸರ್! ನನ್ನ ಜನನ ಮರಣ ಎಲ್ಲಾ ತಮ್ಮ ಕೈಲಿದೆ" ಎಂದ.

ಅರ್ಥವಾಗಲಿಲ್ಲ. "ಏನ್ರೀ ಹಾಗಂದರೆ?" ಎಂದೆ.

"ಸಾರ್, ತಾವು ನನ್ನ ಕೈ ಬಿಟ್ಟರೆ, ನಾನು ಸತ್ತೆ. ತಾವು ನನ್ನ ಕೈ ಹಿಡಿದರೆ ನಾನು ತಿರುಗಿ ಹುಟ್ಟಿ ಬಂದ ಹಾಗೆ, ಸರ್!" ಎಂದ.

ಏನೋ ಪ್ರಾಣಿ, ನಾನು ಸಿ. ಆರ್. ಬಿ. ಆಫೀಸಿನಲ್ಲಿ ಇದೇನೆ ಅಂತ ಏನಾದರೂ ತಿಳಿದುಕೊಂಡಿದೆಯೋ ಏನೋ" ಎಂದುಕೊಂಡು "ನನ್ನ ಯಾರು ಅಂತ ತಿಳಕೊಂಡಿದೀರಿ?" ಎಂದೆ.

"ತಾವು ಕಾಲೇಜಿನಲ್ಲಿ ಇಂಗ್ಲಿಷ್ ಮೇಷ್ಟರಲ್ಲವೇ ಸಾರ್. ಈ ವರ್ಷ...."

ಹಾಗಂತ ಬಾಯಿ ತೆಗೆದನೋ ಇಲ್ಲವೋ, ಅವನ ಪೂರ್ವೋತ್ತರವೆಲ್ಲ ನನಗೆ ತಿಳಿದುಹೋಯಿತು.

" ಈ ವರ್ಷ ?" ಎಂದೆ.

" ಹೌದು ಸರ್."

" ಗ್ರೂಪು ?"

" ಹೌದು ಸರ್. ಇಂಗ್ಲಿಷ್ ಒಂದೇ. ತಮ್ಮ ಆಶೀರ್ವಾದ."

" ಎಷ್ಟನೇದು ?"

" ಎಂಟನೇದು ಸರ್. ನನ್ನ ರಿಜಿಸ್ಟರ್ ನಂಬರು...."

" ನೋಡ್ರಿ. ನಿಮ್ಮ ರಿಜಿಸ್ಟರ್ ನಂಬರು ಹೇಳಬೇಡಿ. ಹೇಳಿದರೆ, ಅದನ್ನ ನಾನು ಯೂನಿವರ್ಸಿಟಿಗೆ ರಿಪೋರ್ಟ್ ಮಾಡಬೇಕಾಗುತ್ತೆ...."

" ಅದ್ರೆ ಸಾರ್, ಈ ಸಲಾನೂ ಫೇಲ್ ಆಗಿಬಿಟ್ಟರೆ, ನಾನು ಆತ್ಮಹತ್ಯೆ ಮಾಡಿಕೊಂಡುಬಿಡತೇನೆ ನನ್ನ ಹಿರೇಮಗ ಪ್ರೈಮರಿ ಎರಡರಿಂದ ಮೂರನೇ ಕ್ಲಾಸಿಗೆ ಹೋಗತಾನೆ ಸಾರ್, ಈ ವರ್ಷ !"

" ಅದಕ್ಕೇ ನೋಡಿರಿ, ಹೇಳಬೇಡಿ. ನಾನು ಬೆಲೆ ಕಟ್ಟೋ ಉತ್ತರ ಪತ್ರಿಕೆಗಳಲ್ಲಿ ಒಂದು ಎಂಟನೇ ವರ್ಷದ ಪತ್ರಿಕೆಯಿದೆ. ಅದು ಫೇಲಾಗಿಬಿಟ್ಟರೆ, ಒಂದು ಆತ್ಮಹತ್ಯೆ ನಡೆದುಹೋಗಿಬಿಡುತ್ತೆ. ಆದರ ಪಾಪ ನನ್ನ ತಲೆಗೆ ಅಂಟಿ ಬಿಡುತ್ತೆ. ಆದ್ದರಿಂದ ಯಾರೂ ಫೇಲಾಗದ ಹಾಗೆ ನೋಡಿಕೊಳ್ಳಬೇಕಾದ್ದು ನನ್ನ ಧರ್ಮ—ಎಂದು ನಾನು ಎಚ್ಚರದಿಂದಿರುತೇನೆ. ಫೇಲಾಗಬಹುದಾದವರು ಇನ್ನೂ ಐವತ್ತು ಜನ ನಿಮ್ಮ ನೆಪದಲ್ಲಿ ನುಣಿಚಿಕೊಳ್ಳಲಿ, ಬಿಡಿ. ನೀವೇನೂ ಹೆದರಬೇಡಿ." ಎಂದೆ.

ಅಲ್ಲ, ನಾನು ಹಾಸ್ಯಕ್ಕೆ ಎಂದು ನಗದೆ ಗಂಭೀರ ಮುಖ ಮಾಡಿ ಹೇಳಿ ದರೆ, ಆ ಪ್ರಾಣಿ ಅದನ್ನೂ ನಂಬಿಬಿಡೋಣವೆ !

" ಸಾರ್ ! ತಮ್ಮಂಥವರು ನಮ್ಮ ದೇಶದಲ್ಲಿ ಇನ್ನು ಹತ್ತು ಜನ ಇದ್ದು ಬಿಟ್ಟರೆ, ಈ ಪರೀಕ್ಷೆಗಳನ್ನೇ ನಿಲ್ಲಿಸಿಬಿಡಬಹುದು ಸಾರ್ !" ಎಂದು ಆನಂದ ದಿಂದ ಕುಣಿದು ಕುಪ್ಪಳಿಸಿಬಿಟ್ಟ. " ಜೂನಿಯರ್ ಬಿ.ಎಸ್‌ಸಿ. ಪುಸ್ತಕ ಎಲ್ಲಾ ಈಗಲೇ ಕೊಂಡುಕೊಂಡುಬಿಡತೇನೆ" ಅಂತ ಸ್ವರ್ಗ ಸಿಕ್ಕಿದವನ ಹಾಗೆ ಸಂತೋಷದಿಂದ ಅತ್ತುಬಿಟ್ಟ.

ಪಾಪ, ನೆನೆದರೆ ನಗೆ ಬರುತ್ತದೆ. ಹಾಗೆಯೇ ಯೋಚನೆ ಮಾಡಿದರೆ, ಅಯ್ಯೋ ಎನ್ನಿಸುತ್ತದೆ.

# ಬೆಕ್ಕಿಗೆ ಚೆಲ್ಲಾಟ

ಪರೀಕ್ಷೆ ನಡೀತಾ ಇತ್ತು. ಹುಡುಗರೆಲ್ಲಾ, ಏನೋ ತಮಗೆ ತೋಚಿದ್ದು, ದೇವರೇ ಗತಿ ಅಂತ ಕಾಗದದ ಮೇಲೆ ಕಕ್ಕುತಾ ಇದ್ದರು. ಮೇಲುಸ್ತುವಾರೀಗೆ ಅಂತ ಕುರಿ ಕಾಯೋಕೆ ನಿಂತುಕೊಂಡ ತೋಳ ಒಂದೊಂದು ಹೆಜ್ಜೆಗೂ ಒಂದೊಂದು ಗುಮಾನೀ ಗುಳಿಗೇನ ಒಬ್ಬೊಬ್ಬ ಹುಡುಗನ ಕಡೇಗೂ ಕಡೆಗಣ್ಣಿನ ಬಂದೂಕದಿಂದ ಬಿಗೀತಾ, ಪರೀಕ್ಷಾಭವನ ಎಷ್ಟು ಚದರಡಿ ಇರಬಹುದು ಅಂತ ಪುನಃ ಪುನಃ 'ಹೆಜ್ಜೆಮೇಲೊಂದ್ಹೆಜ್ಜೆಯನ್ನಿಟ್ಟು' ಶುಕ್ರವಾರದ ಲಕ್ಷ್ಮಿಯಂತೆ ಅಳೀತಾ ಇತ್ತು. ತೋಳ ಯಾವುದು ಅಂತ ಅರ್ಥ ಆಗಿರಬೇಕಲ್ಲ? ತೋಳ ಅಂದರೆ—ಹಾಲಿನಲ್ಲಿ ಯಾರಾದರೂ ಕಾಪಿ ಮಾಡಿ ಕುಡಿಯೋದಾದರೆ ಅವರನ್ನ ಪುಡುಚುಕೊಳ್ಳೋಣ ಅಂತ ಹೊಂಚು ಹಾಕ್ತಾ ಇದ್ದ ಮೋಳಬೆಕ್ಕು ಮೇಷ್ಟರು.

ಗುರುಗಳ ಆಸೆಯನ್ನು ಪೂರೈಸದಿದ್ದರೆ ಅವನೆಂಥ ಶಿಷ್ಯ? ಮೇಷ್ಟರಿಗೆ ನಿರಾಶೆಯಾಗಬಾರದು, ಅವಗು ಕೃತಕೃತ್ಯರಾಗಬೇಕು. ಆದರೆ ಮೇಷ್ಟರಿ ಗೋಸ್ಕರ ತಾನು ಮಾಡಿದೆ ಅನ್ನೋ ಹೆಸರು ತನಗೆ ಬರಬಾರದು ಅಂತ—ಒಬ್ಬ ಮೂಲೇಲಿ ಕೂತ ಹುಡುಗ ಮೆಲ್ಲಗೆ ಜೇಬಿನಿಂದ ಒಂದು ಕಾಗದ ತೆಗೆದು, ಕಣ್ಣೆಲ್ಲಾ ಕಿಟಕಿಯಿಂದ ಹೊರಗಡೆ ಆಕಾಶದ ವಿಶಾಲದಲ್ಲಿ, ಬಲಗೈಯೆಲ್ಲಾ ಮೇಜಿನ ಮೇಲುಗಡೆ, ಎಡಗೈಯೆಲ್ಲ ಮೇಜಿನ ಕೆಳಗಡೆ,... ಹೀಗೆ ಭಗವಂತ ಕೊಟ್ಟ ಬುದ್ಧಿಯನ್ನೆಲ್ಲ ಖರ್ಚುಮಾಡಿ, ಸದ್ದಾಗದ ಹಾಗೆ, ಮಡಿಸಿದ್ದ ಕಾಗದ ವನ್ನು ಬಿಡಿಸಿ, ಎಡಗೈಯ ಮೊಣಕೈಯಡಿಗೆ ತಂದು ಸೇರಿಸಿ, ಇನ್ನೇನು ಕಾಪಿ ಮಾಡಿಕೊಂಡು ಹೀರಬೇಕು—

ನೋಡಿಬಿಟ್ರು ಮೇಷ್ಟರು. ಶಿಷ್ಯನ ಗುರುಭಕ್ತಿಗೆ ಮೆಚ್ಚಿದರು. "ನೀನೇ ಅಲ್ಲವೆ! ಕೊನೇ ಬೆಂಚಲ್ಲಿ ಕೂತುಕೊಂಡು ಕಾಗದದ ಜೆಪ್ಲೀನ್ ಬಿಡತಾ

ಇದ್ದವನು!" ಅಂತ ನಾಲಗೆ ಚಪ್ಪರಿಸಿಕೊಂಡರು. "ಚೀಪಿಸ್ತೀನಿ ನಿಂಗೆ ಚಳ್ಳೆಹಳ್ಳನ್ನ! ಆಡಿಸ್ತೀನಿ ನಿಂಗೆ ಅಟ್ಟದಾಟಾನ!" ಅಂತ ಮನಸ್ಸಿನಲ್ಲೇ 'ತ್ರಧಿಕ್ಕಿಣ್ಣದ್ದೋಂ' ಅಂದರು. ಕಣ್ಣಿನಿಂದ ಅವನ್ನ ತಿಂದುಬಿಡೋ ಹಾಗೆ ನೋಡಿದರು. ಹಸಿದ ಹುಲಿ ಹೆಜ್ಜೆ ಹಾಕುವ ಹಾಗೆ ಹೆಜ್ಜೆ ಹಾಕುತಾ ಬಂದರು! ಬಂದು ಸುಮ್ಮನೆ ನಿಂತರೇ! ಉಹುಂ! 'ಪ್ಯಾನ್!' ಅಂತ ಆರ್ಭಟಿಸಿದರು.

ಹುಡುಗ ನೋಡಿದ. "ಓಹೋ, ಆಗ್ಹೋಯ್ತು ಇವತ್ತು ನನ್ನವತಾರ. ಇವತ್ತು ನನ್ನೇನಾರ ಇವರು ಇಡಕೊಟ್ಬುಟ್ರೆ, ಇವರಿಗೆ ಪಟ್ಟಾಭಿಷೇಕ ಮಾಡಿ ಬಿಟ್ಟೇ ಹೋಗೋದು" ಅಂತ ಮನಸ್ಸು ಮಾಡಿಕೊಂಡು, ಪುರೋಹಿತರು ಪವಿತ್ರ ಸಿಕ್ಕಿಸಿಕೊಳ್ಳೋ ಹಾಗೆ ಪೇನಾನ ಕಿವಿಗೆ ಸಿಕ್ಕಿಸಿಕೊಂಡು, ಮಸಿ ಕುಡಿಕೇನ ಕೈಗೆತ್ತಿಕೊಂಡ, ಅಭಿಷೇಕದ ಗಿಂಡಿ ಹಿಡಿದ ಹಾಗೆ.

ಮೇಷ್ಟ್ರು ಕಣ್ಣು ಬಿಟ್ಟರು. "ಅಲ್ಲ, ಬೆಕ್ಕಿಗೆ ಚೆಲ್ಲಾಟ ಅನ್ನೋ ಹಾಗೆ, ಕೊಂಚ ಚುಡಾಯಿಸೋಣ ಅಂತ ಅಂದರೆ, ಇವನೂ ಏನೋ ಚೆಲ್ಲಾಟಕ್ಕೇ ತಯಾರಾಗಿರೋ ಹಾಗಿದೆಯಲ್ಲ!" ಅಂತ ಒಂದು ಹೆಜ್ಜೆ ಹಿಂದೆ ಇಟ್ಟರು. ಜವಾನನಿಗೆ ಧಿಕ್ಕಿ ಹೊಡೆದರು. "ನೀರು ಕೊಡೋ ಹುಡುಗನ್ನ ಕರೆಯೋ" ಅಂದರು. ನೀರು ಕೊಡೋ ಹುಡುಗನಿಗೆ ಧಿಕ್ಕಿ ಹೊಡೆದರು. "ಆ ಹುಡುಗನಿಗೆ ಒಂದು ಲೋಟ ನೀರು ಬೇಕಂತೆ, ಕೊಡಯ್ಯ" ಅಂದರು. "ಹಾಗೇ ನನಗೂ ಒಂದು ಲೋಟ ನೀರು!" ಅಂದರು. ಗಂಟಲು ಒಣಗಿಕೊಂಡಿತ್ತು. ಮಾಮನ ನಿಗೆ ಬಲಿಯ ತಲೆ ಸಿಕ್ಕಿದ ಹಾಗೆ, ಕಾಲಿಗೆ ಒಂದು ಕಿತ್ತಳೆ ಗಾತ್ರದ ಕಲ್ಲು ಸಿಕ್ಕಿತು. ಜಾರಿ ಬೀಳುವಷ್ಟರಲ್ಲಿ ಜವಾನ ಹಿಡಿದ.

ಮೇಷ್ಟರಿಗೆ ತಲೆಯಿಂದ ಕಾಲಿನವರೆಗೂ ಬೆವರಿನ ಅಭಿಷೇಕವಾಗಿತ್ತು.

# ಲೆಕ್ಚರ್ ಬುಡೋದು

.. ಆ ದಿನ ಎಲ್ಲಾ ಕಳಧೋಯ್ತು ಸಾರ್. ' ಹಿಂದೆ ನಮ್ಮ ಶಾಸ್ತ್ರಿಗಳು ಹರಿಕಥೆ ' ಮಾಡ್ತಾ ' ಇದ್ರು, ನಮ್ಮ ಕೃಷ್ಣಪ್ಪನೋರು ಕಚೇರಿ ' ಮಾಡ್ತಾ ' ಇದ್ರು, ನಮ್ಮ ಮೇಷ್ಟರುಗಳು ಪಾಠ ' ಮಾಡ್ತಾ ' ಇದ್ರು, ಮನೇಲಿ ನಮ್ಮ ಅಜ್ಜಿ ಅಡಿಗೆ ' ಮಾಡ್ತಾ ' ಇದ್ರು, ನಾವೆಲ್ಲಾ ಊಟ ' ಮಾಡ್ತಾ ' ಇದ್ವು. ಈಗ ಯಾರಿಗೆ ಏನು ಮಾಡೋಕೆ ಬರುತ್ತೆ, ಹೇಳಿ ? ಸರಿಯಾಗಿ ಪದಾರ್ಥ ಸಿಕ್ಕೊಲ್ಲ. ಸಿಕ್ಕಿದರೂ ಬೇಯಿಸೋಕೆ ಬರೋಲ್ಲ. ಏನೋ ಭಗೀರಥ ಪ್ರಯತ್ನ ಮಾಡಿ, ಬಡಿಸಿದರೂ ಅಂತಸ್ನಿ. ಕಾಗೆ ಕೋಳಿ ಕೆದರಿದ ಹಾಗೆ ಕೆದಕ್ತವೆ. ಊಟಾನಾದರೂ ' ಮಾಡೋಕೆ ' ಬರುತ್ತೆ? ಸರಿ, ಊಟಾನೇ ಬರೋಲ್ಲ, ಉಪನ್ಯಾಸ ಎಲ್ಲಿ ಬರುತ್ತೆ ?

.. .ಇನ್ನೂ ಒಂದು ಕಾಲ ಇತ್ತು ಸಾರ್. ಆವಾಗ ಉಪನ್ಯಾಸ ' ಕೊಡತಾ ' ಇದ್ದರು. ಅಲ್ಲ, ದಾನ ತೆಕೊಳ್ಳೋಕೆ ಹೋಗೋ ಬ್ರಾಹ್ಮಣ, ಜೋಳಿಗೆ ದೊಡ್ಡದಾಗಿ ಕಟ್ಟಿಕೊಳ್ಳದೆ ಹೋದರೆ, ಅವನಿಗೆ ಏನು ಭಿಕ್ಷೆ ಹಾಕತಾರೆ ? ನೀವೇ ಹೇಳಿ. ' ಕೂತ್ಕೊಳ್ಳೋವನ್ನ ನೋಡಿ ಕುರ್ಚಿ ಹಾಕು ' ಅಂತ ಗಾದೆ. ಇಲ್ಲದೆ ಹೋದರೆ, ಕುರ್ಚಿಗೆ ಅಪಾಯ, ಅವಮಾನ.

....ಆಮೇಲೆ, ಇನ್ನೂ ಒಂದು ಕಾಲ ಇತ್ತು ಸಾರ್. ಅದು ಉಪನ್ಯಾಸ ಗಳನ್ನ ' ಹೇಳೋ ' ಕಾಲ, ಹೇಳಿದ್ದನ್ನ ಕಿವಿ ಕೊಟ್ಟು ' ಕೇಳೋ ' ಕಾಲ. ಆವಾಗ್ಲೇನೇ ಅಂತಾ ಇದ್ದದ್ದು—' ಇವರು ಈ ಉಪನ್ಯಾಸದಲ್ಲಿ ಈ ವಿಷಯ ತಿಳಿಸ್ತಾರೆ ' ಅಂತ. ಅಲ್ಲ, ನೀವೇ ಹೇಳಿ ಸಾರ್,—ಏದಾದರೂ ಕದಡಿಹೋಗಿ ದ್ದರೆ, ಅದನ್ನ ' ತಿಳಿಸ ' ಬಹುದೇ ಹೊರತು, ಖಾಲಿ ಬುರುಡೆ ಒಂದನ್ನ ನಿಮ್ಮ

ಕಣ್ಣಿಂದೆ ಕೂರಿಸಿದರೆ, ಅಥವಾ ನಿಮ್ಮ ಕೈಲೇ ಮಡಗಿದರೆ, ಅದರಲ್ಲಿ ನೀವೇನು ಸಾರ್ ತಿಳಿಸೋದು—ನಿಮ್ಮ ತಲೆಕಾಯಿ ?

ಕ್ಷಮಿಸಬೇಕು. ಯಾಕೆ ಹೇಳೋಕೆ ಬಂದೆ ಅಂದ್ರೆ—ಆ ದಿವಸಾ ಎಲ್ಲಾ ಆಗ್ಹೋಯ್ತು ಸಾರ್. ಈವಾಗ ಎಲ್ಲಿ ನೋಡಿದರೂ, ಈ ಲೆಕ್ಚರ್ ಅಂತ ಅಂತಾರಲ್ಲಾ ಅದನ್ನು 'ಬಿಡೋದು' ಸರ್ವೇಸಾಧಾರಣವಾಗಿ ಹೋಗಿದೆ. ನಾಯನ್ನ ಕರೆದು ಛೂ ಬಿಡುವ ಹಾಗೆ. ಹನ್ನೆರಡನೇ ದಿನ ಹೋರಿ ಕರುಗೆ ಬರೆ ಹಾಕಿ ಬಿಡೋ ಹಾಗೆ. ಅಥವಾ ಎಳ್ಳುನೀರೂ ಬಿಡೋ ಹಾಗೆ.

ಬಿಡ್ಹೋಕೆ ಬಂದವನು, "ಬುಡೋ, ಬುಡೋ, ಅವಕ್ಕೇನು ಅರ್ತ ವಾಗ್ತದೆ?" ಅಂತಾನೆ. ಬಿಡಿಸಿಕೊಳ್ಳೋಕೆ ಬಂದವನು "ಬುಡೋ, ಬುಡೋ, ಅವನಿಗೇನು ಮಹಾ ಗೊತ್ತು!" ಅಂತಾನೆ.

ಅಂತೂ ಒಟ್ಟಿನಲ್ಲಿ, ಹಿಂದೆ ಇದ್ದ ಹಾಗೆ ಇಲ್ಲ ಸಾರ್, ಈಗ. ಏನೇನೋ ಆಗಿಹೋಯಿತು. ಹೋದರೆ ಹೋಗಲಿ, ಬುಡಿ!

# ರಕ್ಮಾನಿಕಿ ರಿಕ್ಕಿ

" ಅತ್ತೇಗೊಂದು ಕಾಲ, ಸೊಸೇಗೊಂದು ಕಾಲ " ಅಂತ ಗಾದೆ ಹೇಳೋ ಹಾಗೆ ಆಗಿಬಿಟ್ಟರೆ, ಸಂಸಾರ ನಡೆದ ಹಾಗೇನೇ ! ಇದು ಬರಿಯ ಮನೇಲಿ ಮಾತ್ರವಲ್ಲ, ಮಾರುಕಟ್ಟೇಲಾದರೂ ಅಷ್ಟೆ !

ಹೊಟ್ಟೆಗೆ, ಬಟ್ಟೆಗೆ ಕಂಟ್ರೋಲ್ ಬಂದಿತ್ತಲ್ಲ, ಆ ಕಾಲದ್ದು ಈ ಕತೆ.

ನಮ್ಮ ದಿನಸಿ ಅಂಗಡಿ ದೊಡ್ಡವೀರಪ್ಪನಿಗೆ ಒಂದು ಜೊತೆ ಪಂಚೆ ಬೇಕಾಯ್ತು. ತೀರ ಉಟ್ಕೊಳ್ಳೋಕೇ ಇರಲಿಲ್ಲ. ಯಾರೋ ಹೇಳಿದರು— ಲಂಗೂಮಲ್ ಹತ್ತಿರ ಒಂದು ಒಂಬತ್ತು ಜೊತೆ ಬಂದಿದೆ ಅಂತ. ದೊಡ್ಡವೀರಪ್ಪ ಓಡಿದ. ಕೇಳಿದ. ಲಂಗೂ ' ಕೂತ್ಕೊ ' ಅಂದ.

" ಏ ಚೋಕ್ರಾ, ಸಾಕಾರ್ರು ಬಂದವ್ರೆ ನೋಡು. ಒಂದು ಜೊತೆ ಪಂಚೆ, ಎರಡೂಕಾಲು ಗಜ ಸರ್ಟಿಂಗ್, ಐದು ಗಜ ಪಾಪ್ಲಿನ್, ಒಂದು ಶಾಲು, ಒಂದು ಚತ್ರಿ ಬೇಗ ತಂದುಕೊಡು. ಕೊಡಿ ಸಾಕಾರ್ರೆ, ಮೂವತ್ತೇಳೂ ಮುಕ್ಕಾಲು ರೂಪಾಯಿ " ಅಂದ.

" ನನಗೆ ಇದೆಲ್ಲಾ ಬೇಡಪ್ಪ. ಪಂಚೆ ಕೊಡಯ್ಯ, ಸಾಕು " ಅಂದ್ರೆ ದೊಡ್ಡವೀರಪ್ಪ, " ಅದು ಆಗೋಕಿಲ್ಲ ಸಾಕಾರ್ರೆ. ಇದು ಒಟ್ಗೆ ಒಂದ್ ಲಾಟ್. ಖುಷಿ ಇದ್ರೆ ತಗೊಳ್ಳಿ, ಬ್ಯಾಡ್ದೆಹೋದ್ರೆ ಬುಡಿ " ಅಂತ ಗುಡಿಗುಡಿ ಎಳೀತಾ ಕಣ್ಣು ಮುಚ್ಚೇಬಿಟ್ಟ ಲಂಗೂ.

ಮೈಮುಚ್ಚ ಪಂಚೇ ಇಲ್ಲ. ಏನು ಮಾಡತಾನೆ, ದೊಡ್ಡವೀರಪ್ಪ ! ಮೂವತ್ತೇಳೂ ಮುಕ್ಕಾಲು ತೆತ್ತ ಶಾಪ ಹಾಕ್ತಾ ಬಂದ.

ಮೂರು ತಿಂಗಳಾಯಿತು. ಒಂದು ದಿನ, ಮೂರು ವರ್ಷದಿಂದ ದಬ್ಬಣ ಸಾಲ ಮಾರತಾ ಇದ್ದ ದೊಡ್ಡವೀರಪ್ಪನ ಮಳಿಗೇಗೆ ಎರಡು ಮೂಟೆ ಕೊಯಿ

ಮತ್ತೂರು ಸಣ್ಣ ಬಂತು ಅದು ಹೇಗೆ ಕಂಡುಕೊಂಡರೋ ಅದರ ವಾಸನೆ—ಅವನ ಅಂಗಡಿ ಮುಂದೆ ಇರುವೆ ಮುತ್ತಿದ ಹಾಗೆ ಸಾಲು ನಿಂತಿತು, ಕ್ಯೂ. ಅದರಲ್ಲಿ, ನಮ್ಮ ಹಳೇ ಅಪರಾಧಿ ಲಂಗೂಮಲ್ ಢುಂಢೂಮಿಯಾ ಹದಿನೈದನೇ ಇರುವೆ.

" ರಾಂ ರಾಂ ಸೌಕಾರ್‍ರೆ " ಅಂತ ಲಂಗೂ ಹಲ್ಲು ಕಿರಿದ.

" ಬನ್ನಿ, ಬನ್ನಿ, ಶೇಠ್ ಸಾಹಬ್....ಲೋ ಚಿಕ್ಕೋನೆ, ಯಜಮಾನ್ರು ಬಂದಿದಾರೆ. ಮೊದಲು ಸಾಮಾನು ಕೊಡೋ. ಒಂದು ರೂಪಾಯಿ ಕೊಯಿ ಮತ್ತೂರು, ಎಂಟಾಣೆ ಧನಿಯ, ಒಂದೂವರೆ ಸೇರು ಕಡಲೇಬೇಳೆ, ಎರಡು ತೊಲ ಹಿಂಗು, ಮೂರು ಸೇರು ಬಾದಾಮಿ, ಸವಾಸೇರು ಕೈಯೆಣ್ಣೆ, ಒಂದು ಹಿಡಿ ಮೆಣಸಿನಕಾಯಿ....ಕೊಡಿ, ಯಜಮಾನ್ರೆ, ಹದಿನೈದೂ ಮುಕ್ಕಾಲು ರೂಪಾಯಿ " ಅಂತ ಅಂದ ದೊಡ್ಡವೀರಪ್ಪ.

ಹಾಂ ಹೂಂ ಅಂದ ಲಂಗೂ. " ಇದು ಇಷ್ಟು ಒಂದ್ ಲಾಟ್. ಖುಷಿ ಇದ್ರೆ ತಗೊಳ್ಳಿ, ಬ್ಯಾಡ್ದೆ ಹೋದ್ರೆ ಬುಡಿ " ಅಂತ, ಬಾಯಿಗೆ ಎರಡು ಕಾಳು ಕಳ್ಳೆ ಎಸಕೊಂಡ.

ಆದರೆ ಆ ದಿವಸದಲ್ಲಿ ಕೊಯಿಮತ್ತೂರು ಯಾರಿಗುಂಟು ? ಯಾರಿಗಿಲ್ಲ ? ಲಂಗೂ ಬಾಯಿ ಮುಚ್ಚಿಕೊಂಡು ತೆತ್ತುಬಿಟ್ಟು, ಅದೇನೇನೋ ಅರ್ಥವಾಗದ ಅವರ ಭಾಷೇಲಿ ಅಂದ್ಕೊಳ್ತಾ ಹೋದ.

ಇದನ್ನ ನೋಡತಾ ನಿಂತಿದ್ದ ನಮ್ಮ ಆದಿಮೂರ್ತಿ ಕೇಳಿದ : " ದೊಡ್ಡ ವೀರಪ್ಪಗಾರು, ಇದೇಮೋ ಮೀ ಖರಾಮತ್ತು ಅರ್ಥಂ ಕಾಲೇದು."

" ಇದೇ ? ಇದು, ನೀವು ಹೇಳೋ ಹಾಗೆ, ಸೆಟ್ರೆ ' ಠಕ್ಕಾನಿಕಿ ಠಿಕ್ಕಿ ', ' ಮೋಸಾನಿಕಿ ಮೋಸಂ ' " ಅಂತಂದ ದೊಡ್ಡವೀರಪ್ಪ.

# ನಮ್ಮ ನಾಡಿಗೆ ನಮ್ಮ ತ್ಯಾಗ

ಮಾನ್ಯ 'ಕೊರವಂಜಿ'ಯ ಸಂಪಾದಕರೆ, ಸ್ವಾಮಿ,

ಅದು ಯಾವ ಗಳಿಗೆಯಲ್ಲಿ ನಮ್ಮ ಪ್ರಿಯ ಬಾಪೂಜಿ 'ಕುಯಿಟ್ ಇಂಡಿಯಾ' ಘೋಷಣೆ ಕೂಗಿದರೋ—ದೇವರ ಮಂದಾಸನದ ಮುಂದೆ, ರಂಗವಲ್ಲಿಯಲ್ಲಿ, ಅಡುಗೆಯ ಮನೆಯ ಒಲೆಯ ಮುಂದೆ ಬೆರಣಿ ಬೂದಿಯಲ್ಲಿ, ಸ್ನಾನದ ಮನೆಯ ಮಸಿಗೋಡೆಯ ಮೇಲೆ ಸುಣ್ಣದ ನೀರಿನಲ್ಲಿ, ಕಡೆಗೆ ಕಕ್ಕಸಿನ ಮಾಸಲು ಗೋಡೆಯ ಮೇಲೆ ಮೊಂಡು ಮೊಳೆ ಚೂರಿನಲ್ಲಿ ನಮ್ಮ ಮಕ್ಕಳು ಬರೆದದ್ದೂ ಬರೆದದ್ದೇ:—'ಭಾರತ ಬಿಟ್ಟು ತೊಲಗಿ', 'ಭಾರತ ಬಿಟ್ಟು ತೊಲಗಿ' ಅಂತ. ಮೊದಲು ಒಂದೆರಡು ದಿವಸ ಅದನ್ನ ನೋಡಿದಾಗ ನಾನೂ ನನ್ನ ಅರ್ಧಾಂಗಿಯೂ ಗಾಬರಿಬಿದ್ದೆವು—'ಏನೂ! ಹೀಗೂ ಉಂಟೆ ಕಲಿಗಾಲ ದಲ್ಲಿ? ಹೆತ್ತ ತಾಯಿ ತಂದೇನ ತೊಲಗಿ ಅಂತಾರಲ್ಲ ಮಕ್ಕಳು! ಅದೂ ಮನೆ ಅಲ್ಲ, ಭಾರತವನ್ನೇ ಬಿಟ್ಟು ತೊಲಗಬೇಕಂತೆ! ಅಯ್ಯೋ, ಹೀಗೂ ಉಂಟೇ, ಪ್ರಸನ್ನ ವೆಂಕಟರಮಣಸ್ವಾಮೀ!' ಅಂತ ಬೆಚ್ಚಿದೆವು; ಬೆವರಿದೆವು; ಕವಿಗಳು ಹೇಳುವ ಹಾಗೆ 'ಬೆಂಡಾದೆವು.' ಕಡೆಗೆ "ಇದು ನಮ್ಮನ್ನು ಕುರಿತದ್ದಲ್ಲ. ದೂರದಲ್ಲಿ ಆ ಗಾಂಧಿ ಗರ್ಜಿಸಿದ್ದು ನಮ್ಮ ಮಕ್ಕಳ ಹೊಟ್ಟೆಯಲ್ಲಿ ಹಾಗೇ ಗುಡುಗುಡು ಅಂದದ್ದು." ಅಂತ ಮನವರಿಕೆ ಆದ ಮೇಲೇನೇ ನಮಗೆ ಕಣ್ಣು ಗುಡ್ಡೆ ಕೆಳಗಿಳಿದು ಬಂದದ್ದು.

ಇದು ನಡೆದ ಆವಾಗಿಂದಲೂ ನಮಗೆ "ನಮ್ಮ ಮಕ್ಕಳಿಗಿರೋ ಈ ದೇಶಭಕ್ತಿ, ರಾಷ್ಟ್ರಪ್ರೇಮ ಇತ್ಯಾದಿಗಳಲ್ಲಿ ಒಂದಂಶವಾದರೂ ನಮಗೆ ಇರದಿದ್ದರೆ ತೀರ ನಾಚಿಕೆಗೇಡು" ಅಂತ ನಾನೂ ನನ್ನ ಹಾಗೇ ಇನ್ನೊಂದು ಎಂಟು ಹತ್ತು ಗಂಡಸರೂ, ಹಾಗೇ ಒಂದು ದಿನ ಇಸ್ಪೇಟು ಆಡತಾ, ಮಳೆ ಮಿಂಚು ಗಾಳಿ

ಅತಿಯಾಗಿಬಿಟ್ಟು ದೀಪ ಆರಿಹೋದಾಗ, ಹಾಗೇ ಕತ್ತಲೇಲಿ ಕೂತು ತಪಸ್ಸು ಮಾಡಿದ್ವು ಕಡೆಗೆ ನಮಗೇ ಅನ್ನಿಸ್ತು: 'ಈ ಭಾರತದಿಂದ ಯಾರನ್ನ ತೊಲಗಿಸಬೇಕೋ ಅವರನ್ನ ತೊಲಗಿಸೋಕೆ ನಾವೂ ನಮ್ಮ ಕೈಲಾದ ತ್ಯಾಗ ಯಾಕೆ ಮಾಡಬಾರದು?" ಅಂತ.

ಆದರೆ, ಏನು ತ್ಯಾಗ ಮಾಡಬೇಕು ಅನ್ನುವುದು ಅವೊತ್ತು ಹೊಳೀಲಿಲ್ಲ. ಹೀಗೇ ಇದುವರೆಗೂ ಐದು ವರ್ಷ ಹಾಗೂ ಹೀಗೂ ಕಳೆದುಹೋಯ್ತು. ನಾವೂ ನಿರ್ವಂಚನೆಯಾಗಿ ಈ ವಿಷಯವನ್ನು ಕುರಿತು ಕೂಲಂಕುಶವಾಗಿ ಚರ್ಚೆ ಮಾಡತಾನೇ ಇದೀವಿ -- ಪ್ರತಿಯೊಂದು ಸಲವೂ ಇಸ್ಪೀಟು ಆಟದ ಮಧ್ಯೆ ದೀಪ ಕೆಟ್ಟು ಕತ್ತಲೆ ಕವಿದುಕೊಂಡಾಗಲೆಲ್ಲಾ. ಆದರೆ ದೈವದ ಮುಂದೆ ಮನುಷ್ಯ ಪ್ರಯತ್ನ ಯಾವ ಮೂಲೆ? ಆ ಭಗವಂತನ ಪ್ರೇರಣೆ ಇಲ್ಲದೆ ಈ ನರನ ಕುರಿ ಮನಸ್ಸು ಒಂದು ಹುಲ್ಲೆಸಳನ್ನಾದರೂ ತನ್ನ ಹುಳುಕು ಹಲ್ಲಿನಿಂದ ಕಚ್ಚಬಲ್ಲುದೆ?

ಆದರೆ, ಹಾಗೆಂದು ದೈವದ ಇಚ್ಛೆಯನ್ನು ಕಾದು ಕುಳಿತುಕೊಳ್ಳಲು ಇದು ಸಮಯವಲ್ಲ, ಅಲ್ಲವೆ? ಅವಕಾಶವಿಲ್ಲ ಅಲ್ಲವೆ? ಇದೇ ಆಗಸ್ಟ್ ೧೫ರ ವೇಳೆಗೆ, ಎಂದೋ ತೊಲಗಬೇಕಾಗಿದ್ದವರು ಈಗ ತೊಲಗಿಯೇ ಹೋಗಿ ಬಿಡುವರಲ್ಲವೆ? "ಇವರು ದೇಶಕ್ಕಾಗಿ ಏನೂ ತ್ಯಾಗ ಮಾಡದೆ ಹೋದರು" ಎಂಬ ಅಪವಾದವನ್ನು ಹೊತ್ತು ಬದುಕುವುದಕ್ಕಿಂತ ಆ ೧೫ರ ಒಳಗಾಗಿ ನಾವೂ ಏನನ್ನಾದರೂ ತ್ಯಾಗ ಮಾಡಿ, ಇತರ ತ್ಯಾಗಿಗಳ ಹಾಗೆಯೇ ಕೀರ್ತಿಶೇಷರಾಗುವುದು ಇಹಪರಗಳಿಗೆ ಸಾಧಕವಲ್ಲವೆ?

ಹೀಗೆಂದು ಅನೇಕ ರೀತಿಯಾಗಿ ನಾವೇ - ಎಂದರೆ, ನಾನೂ ನನ್ನಂತಹ ಇನ್ನಿತರ ಎಂಟು ಹತ್ತು ಗಂಡಸರೂ - ಚರ್ಚೆ ಮಾಡಿ, ಒಂದು ಒಮ್ಮತವಾದ ತ್ಯಾಗಕ್ಕೆ ತೀರ್ಮಾನಿಸಿಕೊಂಡಿದ್ದೇವೆ.

ಅದು ಏನೆಂದರೆ:-ನಾವು (ಎಂದರೆ, ನಾನೂ ನನ್ನಂತಹ ಇತರ ಎಂಟು ಹತ್ತು ಗಂಡಸರೂ) ನಮ್ಮ ಹೆಸರುಗಳನ್ನು ಬರೆಯುವಾಗಲೆಲ್ಲ K. K. V. ಭಟ್ಟ, H. L. S. ರಾವ್, P. G. ತಿವಾರಿ, M. D. ವಿಶ್ವೇಶ್ವರ ಎಂದು ಇದೇ ರೀತಿಯಾಗಿ ಮೊದಲರ್ಧ ಇಂಗ್ಲೀಷು, ಕಡೆಯರ್ಧ ಕನ್ನಡ ಆಗಿ, ಅದು ಚಟ್ನೀ ಗಾರರಂತಿರುತ್ತಿತ್ತು. ಈಗ ನಾವು ಅದನ್ನು ಬಿಟ್ಟು, ಶುದ್ಧ ಕನ್ನಡದಲ್ಲಿಯೇ

ನಮ್ಮ ಹೆಸರುಗಳನ್ನು ಹೇಳಿಕೊಳ್ಳಬೇಕೆಂದೂ, ಸಂಕ್ಷೇಪವಾಗಿ ಸೂಚಿಸಬೇಕಾದ ಕಡೆ ಪ್ರತಿಪದದ ಮೊದಲನೆಯ ಅಕ್ಷರಗಳನ್ನು ಆರಿಸಿಕೊಳ್ಳಬೇಕೆಂದೂ ತೀರ್ಮಾನಿಸಿದ್ದೇವೆ. ಉದಾಹರಣೆಗೆ– ನಮ್ಮ ಸ್ನೇಹಿತರ ಜ್ಞಾತಿಯೊಬ್ಬ "G. L ಮರಿಯ" ಎಂಬುವನು "ಗು. ಲಾ. ಮ." ಎಂದು ದಸ್ಕತು ಮಾಡುತ್ತಾನೆ. ಅವನಂತೆಯೇ ನಾವೂ ಮೊದಲು ನಮ್ಮ ಹೆಸರುಗಳಿಂದ ಈ ಇಂಗ್ಲಿಷನ್ನು ತೊಲಗಿಸಬೇಕೆಂದು ನಿರ್ಧರಿಸಿದ್ದೇವೆ.

ನಾವು ಮಾಡುವ ಕೆಲಸವಾದರೂ ಮೇಲೆ ಹೇಳಿದ ಮರಿಯನ ಹೆಸರಿನಂತೆಯೇ ಅವಿವೇಕಿಗಳ ದೃಷ್ಟಿಯಲ್ಲಿ ಹಾಸ್ಯಾಸ್ಪದವಾಗಬಹುದಾದರೂ, ದೇಶಕ್ಷೋಸ್ಕರ ನಾವು ನಮ್ಮ ಮಾನ ಮರ್ಯಾದೆಗಳನ್ನಾದರೂ ತ್ಯಾಗ ಮಾಡಲು ಸಿದ್ಧರಾಗಿರುವೆವೆಂಬುದನ್ನು ತಾವು ದಯವಿಟ್ಟು ತಮ್ಮ ಮಾನ್ಯ "ಕೊರವಂಜಿ"ಯ ಸ್ವಾತಂತ್ರ್ಯ ಸಂಚಿಕೆಯಲ್ಲಿ ಪ್ರಕಟಿಸಬೇಕಾಗಿ ಕೋರುತ್ತೇವೆ.

ಇಂತೀ ತಮ್ಮ ವಿಧೇಯರು,

೧. **ಕಬ್ಬಿನ** ಗದ್ದೆ **ಕಪನಯ್ಯನ** (ಮಗ) **ವಾಸುದೇವ ಭಟ್ಟ.**
೨. **ಹೊಸಕೇರಿ** ಲಚ್ಚಣ್ಣನ (ಮಗ) **ಸುಬ್ಬ ರಾಯ.**
೩. ಪಿನ್ನಪಲ್ಲಿ **ಶಾನುಭೋಗ ಚಿಕ್ಕಯ್ಯ.**
೪. **ಕೋಲಾಟದ ತಿಪ್ಪಯ್ಯನ** (ಮಗ) **ಮಂಗಳಾರತಿ** ಗಣಪಯ್ಯ.
೫. **ಮೂಲೇಮನೆ ದೇವಯ್ಯನವರ** ವಿಶ್ವೇಶ್ವರ.
೬. ಹನುಮನ **ಜಾಗಟೆ ಮಾದ.**

# ಕ್ಯೂ—ಕ್ಯೂಊ—ಕ್ಯೂಊಊ !!!

ಮೊನ್ನೆ ಸಾಯಂಕಾಲ ಮನೆಗೆ ಬರತಾ ಹಾಗೇ ಬಲಗಡೆ ನಮ್ಮ ಬಟ್ಟೆ ಕೂಪನ್ ಅಂಗಡಿ ಹತ್ತಿರ ಒಂದು ಬೋರ್ಡ್ ನೋಡಿದೆ. "ನಾಳೆ ಬೆಳಗ್ಗೆ ರೇಷನ್ ಪಂಚೆ ಕೊಡುತ್ತೇವೆ" ಅಂತ ಅದರ ಮೇಲೆ ಬರೆದಹಾಗಿತ್ತು. ಯಾವುದನ್ನಾದರೂ ಕೇಳಿಯೇ ಕಂಡಿತ ಮಾಡಿಕೊಳ್ಳೋಣ ಎಂದು ಅಂಗಡಿ ಯವರನ್ನ ಕೇಳಿದೆ. "ಬೆಳಗ್ಗೆ ಯೇಳು ಗಂಟೆ ಹೊತ್ತಿಗೆಲ್ಲ ಬಿರೀನೆ ಬಂದುಬುಡಿ" ಅಂದ ಅಂಗಡಿಯವನು. "ಸರಿ. ಇವನು ಹೇಳಿದ ಹಾಗೆ ಯೇಳು ಗಂಟೆ ಹೊತ್ತಿಗೆ ಬಂದರೆ ಯೇಳಬೇಕಾದ್ದೇ ಇಲ್ಲ – ಇವನ ಅಂಗಡಿ ಮುಂದೆ ಮುತ್ತಿ ಕೊಳ್ಳೋ ಇರುವೆ ಸಾಲಿನ ಕ್ಯೂನ" ಎಂದು ಮನಸ್ಸಿನಲ್ಲೇ ಅಂದುಕೊಂಡು ಮನೆಗೆ ಬಂದೆ. ಬಂದವನೆ, ಎಂಟು ಗಂಟೆ ಒಳಗಾಗಿ ಒಂದು ಊಟದ ಶಾಸ್ತ್ರ ಮುಗಿಸಿ, "ಏನೇ, ನಾಳೆ ಬೆಳಗ್ಗೆ ಪಂಚೆ ಕ್ಯೂ ಅಂತೆ. ಅವನೇನೋ ಏಳು ಗಂಟೆಗೆ ಬಂದರೂ ಪರವಾ ಇಲ್ಲ ಅಂದ. ಆದರೆ ನಾನೇನೋ ನಾಕೂವರೆ ಗಂಟೆಗೇ ಅಲ್ಲಿಗೆ ಹೋಗಿ, ಅವನ ಅಂಗಡಿ ಮುಂದೆ ಝಂಡಾ ಹಾಕಿಬಿಡಬೇಕು ಅಂತ ಇದೀನಿ. ಅಲಾರಂ ಇಟ್ಟಿದೀನಿ. ಮಧ್ಯೆ ನನ್ನ ಎಬ್ಬಿಸಬೇಡ." ಅಂತ ಹೇಳಿ, ಹಾಗೇ ಕೈಲಿ ಒಂದು ಕತೆ ಪುಸ್ತಕ ಹಿಡಿದು, ದಿಂಬಿಗೆ ತಲೆ ಕೊಟ್ಟೆ.

ನಾಲ್ಕು ನಾಲ್ಕೂವರೆ ಹೊತ್ತಿಗೆ ಎದ್ದು, ಹಲ್ಲು ಕೂಡ ಉಜ್ಜದೆ, ಓಡಿ ಹೋಗಿ ನೋಡಿದರೆ – ಆ ಬಟ್ಟೆ ಅಂಗಡಿ ಮುಂದೆ, ಈಚೆ ಪಕ್ಕದಲ್ಲಿ ಹದಿನೈದು ಜನ, ಆಚೆ ಪಕ್ಕದಲ್ಲಿ ಹದಿನೆಂಟು ಜನ ಚಾಪೆ, ಜಮಖಾನೆ, ಹಾಸಿಗೆ ಬಿಡಿಸಿ ಕೊಂಡು, ಧಿಂರಂಗ ಅಂತ ಬಿದ್ದುಕೊಂಡು ಗೊರಕೆ ಹೊಡೀತಾ ಇದಾರೆ!

ನೋಡಿದೆ. "ಸರಿ. ಬೆಳಗಿನ ಜಾವದ ಚಳೀಲಿ ಯಾರು ಯಾರು ಬರ ಬಹುದೋ ಅವರೆಲ್ಲ ರಾತ್ರಿಯೇ ಬಂದಾಗಿದೆ. ಇವರ ಮಧ್ಯೆ ಎಲ್ಲಾದರೂ

ಇವರಿಗೆ ಕಾಣದ ಹಾಗೆ ತೂರಿಕೊಂಡಿರೋಣ ಎಂದರೆ, ಮೊದಲು ಬಂದು ಮಲಗಿದವನ ಕಾಲಿಗೆ ಆಮೇಲೆ ಬಂದು ಮಲಗಿದವನು ತಲೆ ಸಿಕ್ಕಿಸಿಕೊಂಡು ಬಿದ್ದಿದ್ದಾನೆ. ಒಳ್ಳೇದು. ಇಲ್ಲಿ ಚಳೀಲಿ ಕೂತು ಏಳು ಗಂಟೇವರಿಗೂ ಒಣಗೋದಕ್ಕಿಂತ, ಆ ಪಕ್ಕದಲ್ಲಿ ದೀಪ ಹತ್ತಿಸಿದಾನಲ್ಲ–ಆ ಹನುಮಂತರಾಯನ ಹೋಟಲಿನಲ್ಲಿ ಮುಖಕ್ಕೆ ಇಷ್ಟು ನೀರು ಚಿಮುಕಿಸಿಕೊಂಡು, ಪೀಪೀಗೆ ಇಷ್ಟು ಕಾಪಿ ಹುಯಿದುಕೊಂಡು ಬರೋಣ" ಅಂದುಕೊಂಡವನೇ ಆ ಕಡೆಗೆ ಹೊರಟೆ.

ಕಲಿಗಾಲ! ಕಡಲಿಗೆ ಹೋದರೂ ಕಾಲುದ್ದಾನೇ ನೀರು! ಆಂಜನೇಯ ರಮಾರಮಣ ಗೋವಿಂದಾ ಗೋವಿಂದ! ಹನುಮಂತರಾಯನ ಹೋಟಲಿನಲ್ಲಿ ಕಾಫೀಗೂ ಕ್ಯೂನೇ! ಬೆಳಗಿನ ಜಾವ ನಾಕೂವರೆ ಗಂಟೆಗೆ!

ಮುಖ ತೊಳೆದುಕೊಳ್ಳೋಣ ಅಂತ ನಲ್ಲೀ ಹತ್ತಿರ ಹೋದೆ. ಹೇಳಿದರೆ ನಂಬುತೀರೋ ಇಲ್ಲವೋ –– ಆ ಕೊರೆಯೋ ಚಳಿಯಲ್ಲಿ ತಣ್ಣೀರು ನಲ್ಲಿಯ ಹತ್ತಿರವೂ ಕ್ಯೂ ಎಂದರೆ ಏನು ಹೇಳೋಣ!

ನುಗ್ಗಿಹೋಗಿ ಕ್ಯೂ ಕೆಡಿಸಿಬಿಡೋಣವೆ ಎಂದು ಒಂದು ಅರ್ಧ ನಿಮಿಷ ಮನಸ್ಸು ದಂಗೆಯೆದ್ದಿತು. ಆದರೆ ನನ್ನ ಮುಂದೆ ಖಾಕಿ ಬಟ್ಟೆ ಹಾಕಿಕೊಂಡು ಒಬ್ಬ ಮಿಲಿಟರಿ ನಿಂತಿದ್ದ. ಪಾಪ, ಎಷ್ಟು ಹೊತ್ತಿನಿಂದ ನಿಂತಿದಾನೋ ಏನೋ ಕೇಳೋಣ ಎಂದು ಮೆಲ್ಲಗೆ 'ರೀ!' ಎಂದೆ. ಆತ 'ಅಬೌಟ್ ಟರ್ನ್' ಅಂದ ಹಾಗೆ ತಿರುಗಿದ. ನೋಡಿದರೆ–ಯಾರು? ಅವನೇ! ನಂ ಕಸಕಟ್ಟೆಕಾಯಿ ಕಿಟ್ಟಿ! ನಮ್ಮ ಸೀಬೆ ಮರಕ್ಕೆ ಹತ್ತಿ ನನ್ನ ಕೈಲಿ ಒದೆ ತಿನ್ನುತಿದ್ದವನು!

"ಇವನಿಗೆ ಹೆದಕರ್ಕೊಂಡು ಕ್ಯೂ ಮುರೀದೆ ನಿಂತೆನಲ್ಲ ನಾನು!" ಅಂತ ಪಶ್ಚಾತ್ತಾಪಪಡತಾ, "ಏನೇ ಆದರೂ ಮಿಲಿಟರಿ ಬಟ್ಟೆ ಮಿಲಿಟರಿ ಬಟ್ಟೇನೇ!" ಅಂತ ಸಮಾಧಾನ ಹೇಳಿಕೊಳ್ಳತಾ "ಏನಯ್ಯಾ ಕಿಟ್ಟ? ಇದೇನ್ ಇಲ್ಲಿ?" ಎಂದೆ.

ಕಿಟ್ಟ ಮಿಲಿಟರಿ ಆದರೂ ನಾನು ಕೇಳಿದ್ದಕ್ಕೆ ಕೂಡಲೆ ಉತ್ತರ ಹೇಳಿದ. ಅವನು ಭಾರತ ವಿಮಾನ ದಳದಲ್ಲಿ ಕೆಲಸಕ್ಕಿದಾನಂತೆ. ಅವರ ಕಂಪೆನೀಗೆ ಒಂದು ಹೊಸ ತರಹ ವಿಮಾನ ಬಂದಿದೆಯಂತೆ. ಅದನ್ನ ಅವೊತ್ತೇ ಬೆಳಗ್ಗೆ ಐದು ಗಂಟೆಗೆ ನಮ್ಮೂರಿನಿಂದ ಹೊರಡಿಸಿಕೊಂಡು ಹೋಗಿ, ಅಮೆರಿಕ,

ಇಂಗ್ಲೆಂಡ್, ಜರ್ಮನಿ, ರಷ್ಯ, ಜಪಾನು ಈ ದೇಶಗಳನ್ನೆಲ್ಲ ಮುಟ್ಟಿ, ಹತ್ತು ಗಂಟೆ ವೇಳೆಗೆ ನಮ್ಮೂರಿಗೇ ಹಿಂದಿರುಗಬೇಕಂತೆ.

"ನೀನೂ ಬರುತೀಯಾ ಒಂದು ರೌಂಡು? ಬಿಟ್ಟಿ ಟ್ರಿಪ್ಪು! ನೋಡು!" ಅಂದ.

ಕೈ ಗಡಿಯಾರ ನೋಡಿದೆ. "ಐದು ಗಂಟೆಗೆ ಹೊರಡಬೇಕು ಅಂತೀಯ. ಐದಕ್ಕೆ ಐದು ನಿಮಿಷ ಇದೆ. ಇನ್ನೂ ಮುಖಾನೂ ತೊಳೆದಿಲ್ಲವಲ್ಲ" ಎಂದೆ.

"ಆ್ಞ! ಹಾಗೇ? ಮುಖದ ಮನೆ ಹಾಳಾಯ್ತು. ಬಾ." ಅಂದವನೇ ಎಡಗೈಲಿ ನನ್ನೂ ಹಿಡಿದು ಎಳಕೊಂಡು ಓಡಿದ.

ಹೊರಗಡೆ ಹೋಟಲು ಪಕ್ಕದ ಜಟಕಾ ಸ್ಟಾಂಡಿನಲ್ಲಿ ಹೊಸ ವಿಮಾನ ನಿಂತಿತ್ತು. ಕಿಟ್ಟಿ ನನ್ನೂ ಎಳಕೊಂಡು, ಒಳಗೆ ಕೂತು, ಯಾವುದೋ ಮೂರು ನಾಕು ಗುಂಡಿ ಒತ್ತಿದ. ವಿಮಾನ ಎರಡು ಸಲ ನೆಲಾನ ಒದ್ದು ಮೇಲಕ್ಕೆ ಹಾರಿತು.

ಅದೇನು ಧನುರ್ವೇಗವೋ ಮಿಂಚಿನ ನೇಗವೋ ವಾಯುವೇಗವೋ ಅಥವಾ ಮನೋವೇಗವೋ ಆ ವಿಮಾನದ ವಾಚಾಮಗೋಚರ ವೇಗ! ನಮ್ಮ ಊರು ಬಿಟ್ಟು ಇನ್ನೂ ಹತ್ತು ನಿಮಿಷ ಕೂಡ ಇಲ್ಲ – "ಅಮೇರಿಕಾ!" ಅಂತ ಕೂಗಿದ ಕಿಟ್ಟಿ!

ಕೆಳಗೆ ನೋಡಿದರೆ – ನಿಜವಾಗಿಯೂ ಅಮೇರಿಕಾವೇಯೆ! ನಾನು ಭೂಗೋಳದ ಪುಸ್ತಕದಲ್ಲಿ ನೋಡಿದ್ದ ಹಾಗೆಯೇ – ತದ್ರೂಪು, ತದ್ವತ್ತು, ತತ್‌ಥತ್ತು!

"ಇದೇನಯ್ಯಾ ಇಲ್ಲೂ ಕ್ಯೂನೇ?....ಓಹೊ! ಬಂದೂಕ ಪಿಸ್ತೂಲು ಇಟ್ಟುಕೊಂಡು ಹೊಡೆದಾಡತಾ ಇದಾರಲ್ಲ?" ಎಂದೆ.

"ಅಮೇರಿಕಾದಲ್ಲಿ ಹೀಗೇನೆ. ಕ್ಯೂ ಪದ್ಧತಿಗೆ ಇವರೇ ಪಿತಾಮಹರು. ಇವರೇನು ನಮ್ಮ ಹಾಗೆ ಸೆಗಣಿ ಸಾಲಾಗಿ ಸುಮ್ಮನೆ ಕ್ಯೂ ನಿಲ್ತಾರೇನು? ಹೊತ್ತು ಹೋಗೋದು ಹ್ಯಾಗೆ? ಅದಕ್ಕೋಸ್ಕರ ಪಿಸ್ತೂಲು ಬಂದೂಕ ಇಟ್ಟು ಕೊಂಡು ಹೊಡೀತಾ ಬಡೀತಾ ಆಡತಾ ಇರುತಾರೆ. ನಮಗ್ಯಾಕೆ? ಅವರ ಪಾಡು. ಬಾ, ಮುಂದೆ ಇಂಗ್ಲೆಂಡಿಗೆ ಹೋಗೋಣ" ಎಂದ ಕಿಟ್ಟಿ.

ಇಂಗ್ಲೆಂಡಿಗೆ ಬಂದೆವು. ಅಲ್ಲೂ ಒಂದೊಂದು ಅಂಗಡಿಯ ಮುಂದೂ ಅಸಾಧ್ಯವಾದ ಕ್ಯೂ. ಕೆಲವರು ಕುರ್ಚಿ ಕಾಲುಮಣೆ ತಂದುಕೊಂಡು ಕುಳಿತಿದ್ದಾರೆ. ಕೆಲವರು ನಿಂತುಕೊಂಡು ಒಬ್ಬರಿಗೊಬ್ಬರು ಖುಷಿಯಾಗಿ ಕತೆ ಹೇಳತಾ ಕೇಕೆ ಹಾಕಿಕೊಂಡು ನಗತಾ ಇದಾರೆ ನೋಡಿದರೆ, ಅದೇನೂ ಕ್ಯೂ ಇದ್ದ ಹಾಗೇ ಇಲ್ಲ, ವನಭೋಜನದ ಪಂಕ್ತಿ ಇದ್ದ ಹಾಗೆ ಇತ್ತು.

"ಹುರ್ರೇ ಇಂಗ್ಲೆಂಡ್ !" ಅಂತ ಒಂದು ಕೂಗು ಹಾಕಿ ಮುಗಿಸುವುದರೊಳಗಾಗಿ ಜರ್ಮನಿಗೆ ಬಂದಿದ್ದೆವು. ನೋಡಿದರೆ – ಆ ದೇಶದ ತುಂಬ ಎಲ್ಲಿ ಹುಡುಕಿದರೂ ಒಂದು ಕಣ್ಣಿನ ನೋಟ ನಾಟುವುದಕ್ಕೆ ಕೂಡ ಜಾಗವಿಲ್ಲದ ಹಾಗೆ ಉದ್ದುದ್ದ ಕ್ಯೂ, ಅಡ್ಡಡ್ಡ ಕ್ಯೂ, ದಶದಿಕ್ಕುಗಳಲ್ಲಿಯೂ ಮುಖ ಮಾಡಿ ಕ್ಯೂ! "ಹೋಗಲಿ ಇಷ್ಟು ಜನ ಕ್ಯೂ ನಿಲ್ಲುವಷ್ಟು ಪದಾರ್ಥ ಜರ್ಮನಿಯಲ್ಲಿ ಇನ್ನೂ ಇದೆ ಎಂದಾಯಿತಲ್ಲ!" ಎಂದೆ. ಅದಕ್ಕೆ ಕಿಟ್ಟಿ "ಅಯ್ಯೋ ಬೆಪ್ಪೆ! ಅದು ಅದಕ್ಕಲ್ಲ ಕಣೊ, ಕ್ಯೂ. ಹೀಗೆ ನಿಲ್ಲುವುದು ಇವರಿಗೆ ಕಡ್ಡಾಯದ ಮಿಲಿಟರಿ ಶಿಕ್ಷಣ. ಕ್ಯೂ ನಿಲ್ಲಬೇಕು ಎಂದರೆ, ಕಾಲು ಕೊಳೆತು ಹುಳು ಬೀಳುತ್ತಿದ್ದರೂ ಕ್ಯೂ ಹಾಗೇ ನಿಂತಿರಬೇಕು. ಜರ್ಮನಿ ಅಂದರೆ ಅದು!" ಎಂದು ಹೇಳುತಾ "ಆ ಕ್ಯೂ ಹಾಗಿರಲಿ. ಇಲ್ಲಿ ನೋಡು ರಷ್ಯಾದಲ್ಲಿ!" ಎಂದ.

"ಎಲಾ! ಇವನ ವಿಮಾನವೇ! ಎಷ್ಟು ಬೇಗ ಬಂದೆವು ರಷ್ಯಾಕ್ಕೆ! ನೋಡಿದರೆ – ಏನಿದು? ನಿರ್ಜನ ಶ್ಮಶಾನ ಇದ್ದ ಹಾಗೆ ಇದೆಯಲ್ಲ?" ಎಂದುಕೊಂಡು ಕಿಟ್ಟಿಯ ಕಡೆ ನೋಡಿದ. "ರಷ್ಯಾ ಎಂದರೆ ಇದು! ನೋಡು, ಹೇಗಿದೆ ವ್ಯವಸ್ಥೆ. ಜನ ಏನಾದರೂ ಕ್ಯೂ ಎಂದು ನಿಂತರೋ – ಕೆಲಸ ಮಾಡೋದಕ್ಕೆ ಮೈಗಳ್ಳತನ ಮಾಡಿಕೊಂಡು ಕ್ಯೂ ನಿಂತು ಕಾಲ ಕಳೀತೀರಾ ಅಂತ ಸರ್ಕಾರ ಅವರಿಗೆ ಚರ್ಮಡ ಸುಲಿದುಬಿಡುತಾರೆ. ಅಂಗಡಿಯವರೇನಾದರೂ ಬಾಗಿಲು ತೆರೆದರೆ – ನಮ್ಮ ಕೆಲಸಗಾರರು ಕ್ಯೂ ನಿಂತುಕೊಳ್ಳೋ ಹಾಗೆ ಮಾಡಿ ಅವರ ಕೆಲಸಕ್ಕೆ ಕಲ್ಲು ಹಾಕಿ, ನಮ್ಮ ಸಂಸ್ಥಾನಕ್ಕೆ ನಷ್ಟ ಮಾಡತೀರಾ ಅಂತ ಆ ಅಂಗಡಿಯವರನ್ನ ಗಲ್ಲಿಗೆ ಹಾಕಿಸಿಬಿಡತಾರೆ. ಹೀಗಾಗಿ, ಇಲ್ಲಿ ಜನ ಕ್ಯೂ ನಿಲ್ಲೋ ಹಾಗಿಲ್ಲ, ಇಲ್ಲಿಯ ಅಂಗಡಿಯವರು ಬಾಗಿಲು ತೆಗೆಯುವ ಹಾಗಿಲ್ಲ. ಹೀಗಾಗಿ ಈ ದೇಶದಲ್ಲಿ ಕ್ಯೂ ಪದ್ಧತಿ ತುಂಬ ಯಶಸ್ವಿಯಾಗಿ ನಡೀತಾ ಇದೆ" ಅಂತ ಕಿಟ್ಟಿ ಹೇಳಿದ.

ನನಗೆ ಅರ್ಥವಾಗಲಿಲ್ಲ. "ಅದು ಹೇಗಯ್ಯಾ?" ಎಂದೆ. "ಅದು ಹೇಗೋ ಆ ಭಗವಂತನಿಗೇ ಗೊತ್ತಾಗಬೇಕು. ಆದರೆ ಅವನಿಗೂ ಗೊತ್ತಾಗೋ ಹಾಗಿಲ್ಲ. ಅದು. ಏಕೆಂದರೆ ರಷ್ಯದಲ್ಲಿಭಗವಂತನ್ನ ಒಳಕ್ಕೆ ಸೇರಿಸೋಲ್ಲ." ಅಂದ ಕಿಟ್ಟಿ.

ಅಷ್ಟರಲ್ಲಿ ನಮ್ಮ ವಿಮಾನದ ಮಾರ್ಗದಲ್ಲಿ ಯಾರೋ ಕ್ಯೂ ನಿಂತಿದ್ದ ಹಾಗೆ ಮಸಕುಮಸಕಾಗಿ ಕಾಣಿಸಿತು. "ಕಿಟ್ಟೀ! ಕಿಟ್ಟೀ! ಎದುರಿಗೆ ಕ್ಯೂ! ಎಲ್ಲಾದರೂ ಢಿಕ್ಕಿ ಹೊಡೆದೀಯಾ!" ಅಂತ ಕೂಗಿದೆ. ಕಿಟ್ಟಿ ಕೇಕೆ ಹಾಕಿ ನಗುತ್ತ, ಆ ಕ್ಯೂವನ್ನೇ ಭೇದಿಸಿಕೊಂಡು ನುಗ್ಗಿ, "ಅದು ಯಾವ ಕ್ಯೂ ಗೊತ್ತೇನೊ? ಮೊನ್ನೆ ಜಪಾನ್‌ನಲ್ಲಿ ಆಟಂಬಾಬ್ ಹಾಕಿದಾಗ ಹರೋಹರ ಅಂದರು ನೋಡು, ಅವರಲ್ಲಿ ನರಕಕ್ಕೆ ಹೋಗುವರು ಆಚೆ ಹೋಗುತಾ ಇದಾರೆ. ಸ್ವರ್ಗಕ್ಕೆ ಹೋಗೋವರು ಹೀಗೆ ಕ್ಯೂ ನಿಂತುಕೊಂಡು ಕಾಯ್ಕೊಂಡಿದಾರೆ. ಇದು–ವಿಪಂಚೀಕರಣವಾದ ಪ್ರೇತಗಳ ಪಂಕ್ತಿ – ನಮ್ಮ ಪಂಡಿತರು ಹೇಳೋ ಹಾಗೆ!" ಅಂದ.

ಇಷ್ಟು ಹೊತ್ತಿಗೆ ನನಗೆ – ಮೊದಲೇ ನಿದ್ರೆ ಸಾಲದು : ಮುಖ ತೊಳೆದಿಲ್ಲ; ಕಾಫಿ ಹೊಟ್ಟೆಗೆ ಬಿದ್ದಿಲ್ಲ; ವಿಮಾನಯಾನದ ಹೊಸ ಅನುಭವ; ತಲೆ ತಿರುಗುತಿದೆ ಎಲ್ಲೆಲ್ಲಿ ಹೋದರೂ ಕ್ಯೂ–ಕ್ಯೂ–ಕ್ಯೂ. ಬದುಕಿರುವವರ ಕ್ಯೂ ಸಾಲದು ಅಂತ ಸತ್ತವರ ಕ್ಯೂ ಬೇರೆ ಜೊತೆಗೆ. ನನಗೆ ಹುಚ್ಚು ಹಿಡಿಯುವುದೊಂದು ಬಾಕಿ – ಹಾಗಾಯಿತು.

ಏತನ್ಮಧ್ಯೆ ನನಗೆ ನನ್ನ ಸ್ವಂತ ಪಂಚೆಯ ಕ್ಯೂ ಜ್ಞಾಪಕ ಬಂದು, ಹುಚ್ಚು ಹಿಡಿದವನ ಹಾಗೆ "ಕ್ಯೂ–ಕ್ಯೂಊ-ಕ್ಯೂಊ!!!" ಅಂತ ಕೂಗಿಕೊಳ್ಳುತಾ ಎಡಮಗ್ಗುಲಿಗೆ ಹೊರಳಿದೆ.

"ಇದೇನ್ರೀ ಇದು – ಕೋಳಿ ಕೂಗಿದ ಹಾಗೆ ಕೂಕ್ಕೊಳ್ತೀರಾ? ಏಳ್ರೀ. ಎಂಟೂವರೆ ಗಂಟೆ! ಅಂತ ಮನೆಯವರು ಅಂದ ಹಾಗಾಯಿತು.

ಎದ್ದು ನೋಡಿದರೆ – ಗಂಟೆ ಎಂಟೂವರೆ!

# ನಾಡೀಹಬ್ಬ

### ಅಥವಾ

## ಕನಸಿನೊಳಗೊಂದು ಕನಸು

ಅಲ್ಲ, ಇದು ಬೇಂದ್ರೆ ಪದ್ಯ ಅಲ್ಲ ಅವರದು "ಕನಸಿನೊಳಗೊಂದು **ಕಣಸು.**" ಅಂದರೆ – **ಣಕಾರ.** ನನ್ನದು "ಕನಸು"–ನಕಾರ. ಆದರೂ ಇದು ನ–ಣ ವ್ಯವಹಾರ ಅಲ್ಲ ಅವರದು ಓ ಆದರೆ ನನ್ನನು ಕೋ. ಅಷ್ಟೆ.

ನನಗೆ ಬಹುಕಾಲ ಈ ಕನ್ನಡಮ್ಮನ ಕಂದಗಳನ್ನ ಕಂಡರೆ ಹೊಟ್ಟೇಲಿ ಕಿಚ್ಚು ಹತ್ತಿದ ಹಾಗೆ ಆಗುತಿತ್ತು. ಅವರ ನಾಡಹಬ್ಬಗಳ ವರದಿ ಓದಿದಾಗ ಲೆಲ್ಲ, ಅವರ ಉಪನ್ಯಾಸ ಉಪಾಹಾರಗಳ ವರ್ಣನೆ ಕೇಳಿದಾಗಲೆಲ್ಲ, ಅವರ ತಿಂಡಿ ತುರಾಯಿಗಳ ಸುದ್ದಿ ಎದ್ದಾಗಲೆಲ್ಲ ಬಾಯಲ್ಲಿ ನೀರೂರಿ, ಮೈಯೆಲ್ಲಾ ಜ್ವರ ಬಂದ ಹಾಗೆ ಆಗಿಬಿಡುತಿತ್ತು. ನೀನೂ ಒಂದೆರಡು ನಾಡಹಬ್ಬ ನೋಡಿ ಬಿಟ್ಟರೆ ನಿನಗೂ ಈ ಜ್ವರ ನಿಂತುಹೋಗುತ್ತೆ ಅಂತ ಒಬ್ಬಿಬ್ಬರು ಅನುಭವಸ್ತರು ಹೇಳಿದರು. ರಾತ್ರೀ ಹಗಲೂ ಅದನ್ನೇ ನಾನು ಜಪಮಾಡುತಿರುವಾಗ, ಒಂದು ರಾತ್ರಿ ನನಗೊಂದು ಕನಸು ಬಿತ್ತು.

"ಎದ್ದಾಗ ಇಲಿ ಆದದ್ದು ನಿದ್ದೇಲಿ ಹುಲಿ ಆಗುತ್ತೆ" ಅಂತ ಒಂದು ಗಾದೆ. ಅದರ ಹಾಗೆ, ಮಂಗಳೂರಿನಿಂದ ಒಂದು ಆಹ್ವಾನ, ಧಾರವಾಡದಿಂದ ಒಂದು ಆಮಂತ್ರಣ, ಮೈಸೂರಿಂದ ಒಂದು ನಿಮಂತ್ರಣ, ಗುಲ್ಬರ್ಗದಿಂದ ಒಂದು ಕರೆಯೋಲೆ, ಬಳ್ಳಾರಿಯಿಂದ ಒಂದು ಕೂಗುಕಾಗದ – ಹೀಗೆ ಸರಸರ ವಾಗಿ ಸರಪಣಿಯಾಗಿ ಬಂತು—"ನಾಡಹಬ್ಬಕ್ಕೆ ನಮ್ಮಲ್ಲಿಗೆ ಬನ್ನಿ, ನಾಡ ಹಬ್ಬಕ್ಕೆ ನಮ್ಮಲ್ಲಿಗೆ ಬನ್ನಿ" ಅಂತ. ನಾಡಹಬ್ಬ ನಡೆಯುವುದೇ ನವರಾತ್ರೆ ಕಾಲದಲ್ಲಿ. ನವರಾತ್ರೆ ನಡೆಯುವುದೋ ಒಂಬತ್ತು ದಿವಸ ಮಾತ್ರ. ನನ್ನನ್ನ

ಕರೆಯುತ್ತಿರುವವರೋ ಹತ್ತು ಹದಿನೈದು ಜನ. ಎಲ್ಲಿಗೆ ಹೋಗುವುದು, ಎಲ್ಲಿಗೆ ಬಿಡುವುದು ಒಂದೂ ತೋಚದೆ, ಲಾಟರಿ ಹಾಕಿದ ಹಾಗೆ ಚೀಟಿ ಹಾಕಿ ತೆಗೆದೆ. ಮೊದಲು ಮಂಗಳೂರು ಬಂತು. ಗಂಟು ಮೂಟೆ–ಅಲ್ಲ–ಟ್ರಂಕು ಹೋಲ್ಡಾಲ್ ಕಟ್ಟಿದೆ.

ಮಂಗಳೂರಿನ ಹತ್ತಿರ ಸಮುದ್ರ ಇದೆ ಅಂತ ಯಾರೋ ಹೇಳಿದ್ದರು. ಆದರೇನು? ಪಾಪಿ ಮಂಗಳೂರಿಗೆ ಹೋದರೂ ಮೊಣಕಾಲುದ್ದವೇ ನೀರು! ಟ್ರಂಕಿನ ಮೇಲೆ ಹಾಸಿಗೆ ಇರಿಸೋ ವೇಳೆಗೆ ವೈರ್ ಬಂತು. "ಮಂಗಳೂರಲ್ಲಿ ಪ್ಲೇಗು. ನಿಮಗೆ ಬದುಕೋ ಆಸೆ ಇದ್ದರೆ ಈ ಕಡೆ ಮುಖ ತಿರುಗಿಸಬೇಡಿ" ಅಂತ. ಏನೋ, ನಾಡಹಬ್ಬದ ನೆಪದಲ್ಲಿ ಘಟ್ಟ ಗಿಟ್ಟ ನೋಡೋಣ ಅಂತಿದ್ದೆ. ಅದಕ್ಕೆ ಬಿತ್ತು – ಚಕ್ರ.

ತಿರುಗಿ ಲಾಟರಿ ಹಾಕಿದೆ. 'ಗದಗು' ಅಂತ ಬಂತು: 'ಚಪ್ಪಲಿ' ಅಂತ ಜ್ಞಾಪಕ ಆಯ್ತು. "ಜೈ ವೀರನಾರಾಯಣ'!" ಅಂದುಕೊಂಡವನೆ ಹಾಸಿಗೆಯನ್ನ ಟ್ರಂಕಿನ ಮೇಲೆ ಇಟ್ಟು ಹೊರಟೇಬಿಟ್ಟೆ. ಗದಗೂ ಸೇರಿದೆ. ಅಲ್ಲಿ ಒಬ್ಬ ದೊಡ್ಡ ವೈದ್ಯರ ಮನೆಯಲ್ಲಿ ನನಗೆ ಆತಿಥ್ಯ. ಅವರು ಅಲ್ಲಿ "ಮುಂದಿನ ಡಿಸೆಂಬರ್ ತಿಂಗಳಲ್ಲಿ ನೀವು ಇಲ್ಲಿಗೆ ಬರುತೀರಿ ತಾನೆ? ಆಗ ನಮ್ಮ ಅಖಿಲಕರ್ನಾಟಕದ ಗದಗು ಚಪ್ಪಲಿಧಾರಕರ ಸಮ್ಮೇಳನ ನಡೆಯುತ್ತೆ. ನಿಮ್ಮ ಬುಳ್ಳಾಪುರದಿಂದ ನೀವೇ ಪ್ರತಿನಿಧಿಗಳಾಗಿ ಬರಬೇಕು. ಬಂದಾಗ ತಾವು ತಮ್ಮ ಮಿತ್ರರೂ ನಮ್ಮಲ್ಲೆ ಉಳಕೋಬೇಕು. ನಿಮಗೋಸ್ಕರ ಅರ್ಧ ಮನೆ ಖಾಲಿಮಾಡಿಸಿ ಇಡತೇನೆ" ಅಂತ ಹಳಹಳಿಯಿಂದ ಹೇಳಿದರು. "ಆಗಲಿ" ಅಂದೆ.

ಗದಗಿನಲ್ಲಿ ಮತ್ತೆ ಲಾಟರಿ ಹಾಕಿದೆ. 'ಕಲಬುರ್ಗಿ' ಅಂತ ಬಂತು. ಗದಗು ಬಿಟ್ಟೆ; ಕಲಬುರ್ಗಿ ಸೇರಿದೆ. ನನ್ನ ಉಪನ್ಯಾಸ ಹೇಗಾಯಿತೋ ಆ ಊರಿನವರು ಹೇಳಬೇಕು. ಆದರೆ ನನಗೆ ನಡೆದ ಆದರದ ಉಪಾಹಾರ ಆತಿಥ್ಯ ಗಳು ಮಾತ್ರ "ಅಗದಿ ನೆಟ್ಟಗಾದುವು." ಮೂರು ದಿವಸ ಅಲ್ಲಿ ಮೇದು ಮೆಲುಕು ಹಾಕಿ ಆಯಿತು. ಮೂರನೆಯ ರಾತ್ರಿ ಮಹಾರಾಯರೊಬ್ಬರ ಮನೆ ಯಲ್ಲಿ ಮಹಾಸಂತರ್ಪಣೆ. ತಿನ್ನಲಾರದೆ, ಅವರ ಬಲವಂತಕ್ಕೆ ತುರುಕಿಕೊಳ್ಳತಾ ಇದೇನೆ. ಎದುರಿಗೆ ಅಸಾಧ್ಯವಾದ ಚರ್ಚೆ ಅವ್ಯಾಹತವಾಗಿ ನಡೀತಾ ಇದೆ:

"ಲಕ್ಷ್ಮೀಶನ ದೇವಪುರ ಕಡೂರು ಜಿಲ್ಲೆಯ ದೇವನೂರೆ? ಅಥವಾ ಹೈದರಾಬಾದಿಗೆ ಸೇರಿದ ಸುರಪುರವೆ?" ಅಂತ. ಎಲ್ಲರೂ ಮಹಾ ಉದ್ದಾಮ ಸಾಹಿತಿಯಾದ ನನ್ನ ಕಡೆಗೇ ನೋಡುತಾ ಇದಾರೆ, ಕಡೆಯ ನಿರ್ಣಯಕ್ಕೆ. ನನಗೋ–ಕೆಳಗಡೆ ಊಟದ ಭಾರ, ಮೇಲುಗಡೆ ನಿದ್ರೆಯ ಭಾರ ಎಳೆದು ಎಳೆದು ಯಾರು ಯಾರು ಏನೇನು ಮಾತನಾಡಿದರೂ ಅವರವರ ಕಡೆಗೆ ತಲೆ ತೂಗುತಾ ಇದೆ. ಕಡೇಗೆ ಯಾರೋ ಬಂದು, ಕಂಕುಳಿಗೆ ಕೈಕೊಟ್ಟು ಎಬ್ಬಿಸಿ, ಕೈ ತೊಳೆದು, ಕಾಲೊಬ್ಬರು ಒಂದು ಕಡೆ, ತಲೇನೊಬ್ಬರು ಇನ್ನೊಂದು ಕಡೆ ಹಿಡಿದು ಹಾಸಿಗೆ ಮೇಲೆ ಎಸೆದು. ಹೊದಿಕೆ ಮುಸುಕು ಮುಖದ ಮೇಲೆ ಎಳೆದಹಾಗಾಯ್ತು.

ಇಲ್ಲಿಂದ ಮುಂದಕ್ಕೇ ನನಗೆ ಆದದ್ದು—"ಕನಸಿನೊಳಗೆ ಒಂದು ಕನಸು." ಬಂದರು ಇಬ್ಬರು – ಯಮದೂತರು ಇದ್ದ ಹಾಗೆ. "ಸ್ವಾಮಿ, ಸುರಪುರದಲ್ಲೂ ನಾಡಹಬ್ಬ ಮಾಡತೇವೆ. ಬರಬೇಕು" ಎಂದಿತು ಒಂದು ಜೊತೆ ತುಟಿ. "ಮಂಗಳೂರಿನಲ್ಲಿ ಇದ್ದ ಹಾಗೇ ಇಲ್ಲೂ ಮಲೆನಾಡು. ಘಟ್ಟ, ಗಿಟ್ಟ. ಬನ್ನಿ" ಎಂದಿತು ಇನ್ನೊಂದು ಜೊತೆ ತುಟಿ. ಹೋಗೋದೇ ಬೇಡವೇ ಎಂದು ನಾನು ಹೊರಳುತ್ತಿರುವಾಗ, ಒಬ್ಬ ನನ್ನ ಎಡರೆಟ್ಟೇನ ಬಿಗಿಹಿಡಿದು "ಪ್ಲೇಗಿಗೆ ಹೆದರಿಕೊಂಡು ಮಂಗಳೂರನ್ನ ತಪ್ಪಿಸಿಕೊಂಡರೆ, ನಾವು ಬಿಡತೇವಾ ನಿನ್ನ?" ಎಂದ. ಇನ್ನೊಬ್ಬ ಬಲರೆಟ್ಟೆ ಹಿಡಿದು "ಘಟ್ಟ ನೋಡಬೇಕಾ ನೀನು? ಗಿಟ್ಟ? ಬಾ, ಕಟ್ಟಿಟ್ಟದ್ದೇವೆ ನಿನಗೆ ಚಟ್ಟ!" ಎಂದು ತಾಜಾಕವಿಯ ,ಹಾಗೆ ತಾಳ ತಟ್ಟಿಕೊಂಡು ಸಂಬೋಧಿಸಿದ.

ಇಲ್ಲಿಂದ, ನಾಡಪಾಲಿಗೆಲ್ಲ ನಾಡಹಬ್ಬವಾದದ್ದು ನನ್ನ ಪಾಲಿಗೆ ನಾಡೀಹಬ್ಬವಾಯಿತು. ಏನೇನು ಗೋಳುಕರೆದರೂ, ಏನೇನು ದಮ್ಮಯ್ಯಗುಡ್ಡೆ ಹಾಕಿದರೂ, ಆ ಯಮದೂತರು ನನ್ನ ರೆಟ್ಟೆ ಬಿಡಲಿಲ್ಲ. ಕಾವ್ಯದಲ್ಲಿ ಹೇಳುವ ಹಾಗೆ "ವೃಥಾ ವಿಳಂಬ ಮಾಡಿ ಫಲವೇನು?" ಸುರಪುರದ ಸಂದರ್ಶನ ಪ್ಲೇಗಿನ ಸಂದರ್ಶನವೂ ಆಯಿತು. ಅಚ್ಚ ಕನ್ನಡದಲ್ಲಿ ಹೇಳುವುದಾದರೆ ಆ ಅಸುರಪುರದಲ್ಲಿ ನಾನು ಕಾಲಿಟ್ಟ ಕೂಡಲೆ ಪ್ಲೇಗಿನ ಇಲಿ ನನ್ನ ಕಾಲ ಬೆರಳು ಕಚ್ಚಿತು.

ಪ್ಲೇಗು ಬಂದರೆ, ಪ್ಲೇಗು ಡಾಕ್ಟರು ಬರಬೇಡವೆ? ಬರಲೇಬೇಕು. ಸಾಯುವವನ ಕೊನೆಗಾಲದ ಕೋರಿಕೆ ಎಂದು ನಾನು ನನ್ನ ಚಿಕಿತ್ಸೆಗೆ ಎಲ್ಲಾ

ವೈದ್ಯರನ್ನೂ ಬಿಟ್ಟು, ನನ್ನ ಗದಗಿನ ವೈದ್ಯರನ್ನೇ ವರಿಸಿಕೊಂಡೆ. ಆಹ! ಏನು ಮಾಯವೋ! ನೆನೆದವರ ಮನದಲ್ಲೆ ನಾರಾಯಣ! ವೈದ್ಯೋ ನಾರಾಯಣೋ ಹರಿಃ! ಆ ವೈದ್ಯರೂ ಹಾಗೆಯೇ-ಗದಗಿನ ಚಪ್ಪಲಿಯ ಹಾಗೆಯೇ! ಮೆಟ್ಟಿದ ಮೇಲೆ ಬೇಗ ಬಿಟ್ಟು ಕಳೆಯುವಹಾಗಿಲ್ಲ.

ನವರಾತ್ರಿಯಲ್ಲಿ ಅಂಟಿದ ಪ್ಲೇಗಿಗೆ ಅವರೇ ಗತಿ ತೋರಿಸಿದರು. ಮೈ ತುಂಬಿಕೊಳ್ಳುವ ವರೆಗೂ ಇಲ್ಲೇ ಇರಿ, ಎಂದರು. ನವೆಂಬರು ತುಂಬಿದ ವೇಳೆಗೆ ನವೆದುಹೋಗಿದ್ದ ಮೈಯೂ ತುಂಬಿಕೊಂಡಿತು. "ಚಪ್ಪಲಿ ಸಮ್ಮೇಳನಕ್ಕೆ ನಿಲ್ಲಿ" ಅಂತ ಅಂಗಲಾಚಿದರು. "ಹೋಗೋದು ಯಾಕೆ? ಬರೋದು ಯಾಕೆ? ಒಂದೇ ಸಲಕ್ಕೆ ಹೋಗಿಬಿಡಿ" ಅಂದರು. "ವೈದ್ಯರು ಯಾವಾಗ ಕಳಿಸಿದರೆ ಆಗ ತಾನೆ ಹೋಗಬೇಕು!" ಅಂದೆ. ಕ್ರಿಸ್‌ಮಸ್ ಬಂತು. ಚಪ್ಪಲಿ ಸಮ್ಮೇಳನ ಬಂತು. ಬಂತು, ಹೋಯ್ತು. ಜನವರಿ ತಿಂಗಳಿಗೆ ಹೊಸ ಜನ್ಮ ಬಂತು ಅಂತ, ಏಳೋದೂ ಬೀಳೋದೂ ಕಾಣದೆ ಊರಿಗೆ ಓಡೋಡಿ ಬಂದೆ.

ಮೊದಲನೆಯ ತಾರೀಕು ಆಫೀಸಿಗೆ ಹೋದೆ. "ಯಾರ್ರೀ ಅದು?" ಅಂದ ಜವಾನ. "ನಾನು!" ಅಂದೆ, ಜಬರದಸ್ತಿನಿಂದ...."ಯಾರಯ್ಯಾ ನೀನು?" ಅಂದ ಗುಮಾಸ್ತ. "ನಾನು ಕಣ್ರೀ! ನಾನು!" ಎಂದೆ, ಹಲ್ಲು ಕಿರೀತ...."ಯಾರೋ ನೀನು?" ಅಂದರು ಸಾಹೇಬರು, "ನಾನ್ ಸಾರ್! ತಮ್ಮ ಪಾದಸೇವಕ!" ಅಂತ ಅಡ್ಡ ಬಿದ್ದೆ. ಸಾಹೇಬರು "ಮೂರು ತಿಂಗಳಿಂದ ಮುಚ್ಚಿಕೊಂಡಿದ್ದ ನಿನ್ನ ಮುಖಾನಾ ತಿರುಗೂ ಇಲ್ಲಿ ತಂದು ಬಿಚ್ತೀಯಾ? ಅಬೌಟ್ ಟರ್ನ್! ಡಿಸ್-ಮಿಸ್!" ಅಂತ ಗರ್ಜಿಸಿ, ಎಡಗಾಲನ್ನ ಎತ್ತಿದರು. "ಘಟ್ಟ ಅಂತೆ! ಬೆಟ್ಟ ಅಂತೆ! ಘಟ್ಟದ ಕಲ್ಲು, ಬೆಟ್ಟದ ಮಣ್ಣು ನಿನ್ನ ಬಾಯಿಗೆ!" ಅಂತ ಎಡಗೈ ಎತ್ತಿದರು.

"ಅಯ್ಯಯ್ಯೋ!" ಅಂತ ಕಿರಿಚಿಕೊಂಡು ಕಣ್ಣುಬಿಟ್ಟೆ. ಕನ್ನಡ ಪತ್ರಿಕೆಗಳ ಕಾಲಂಕಾಲಂಗಳೆಲ್ಲ "ನಾಡಹಬ್ಬ! ನಾಡಹಬ್ಬ!" ಅಂತ ಹೊಡಕೋತಿದ್ದುವು. ನನ್ನ ಎದೆ ಮಾತ್ರ "ನಾಡೀಹಬ್ಬ! ನಾಡೀಹಬ್ಬ!" ಅಂತ ತುಡಿಕೋತ್ತಿತ್ತು.

ಸಾಕಪ್ಪಾ ಸಾಕು—ಈ ನಾಡಹಬ್ಬ! ಈ ನಾಡೀಹಬ್ಬ!

# ವಾಲ್ಮೀಕಿಯ ವೊದ್ದಾಟ

ಇದು 'ವೈದ್ಯನ ವ್ಯಾಧಿ' ಅಲ್ಲ, ಇದು 'ಕೈಲಾಸಂ ಕಾಯಿಲೆ' ಅಲ್ಲ. ಇಲ್ಲ, ಇದು ದಿಟವಾಗಿಯೂ ಒದ್ದಾಟ. ಅವುಡು ಕಚ್ಚುವಷ್ಟು 'ವೊದ್ದಾಟ' ವಾದದ್ದೇ, ಕತೆ.

ನಾನು ಮನೆ ಕಟ್ಸೋಕೆ ಅಂತ ಆ ಸುಡುಗಾಡು ಸೈಟು ತೊಕೊಂಡೆ ನಲ್ಲಾ – ಆಗ ಅದರ ಸುತ್ತಮುತ್ತ ಆಳಾಳೆತ್ತರದ ಹುತ್ತಗಳಿದ್ವು. ಹಾವು ಗಳಿದ್ವೋ ಇಲ್ವೋ ನಾ ಕಾಣೆ. ಮನೆ ಕಟ್ಟಿದ ಶಾಸ್ತ್ರ ಮಾಡಿ, ಅದು ಮುಗಿ ಯೋಕೆ ಮುಂಚೇನೇ ನಾವು ಗೃಹಪ್ರವೇಶ ಮಾಡಿಕೊಂಡ ಮೇಲೆ – ನಮ್ಮ ಮನೆ ಹುಡುಗರು ಸುಮ್ಮನಿರುತ್ತಾರೆಯೇ? – ಆ ಮನೇಗೆ ಒಂದು ಹೆಸರಿಡ ಬೇಕು ಅಂತ – ಅದು ಯಾವ ಮನೆಹಾಳ ಶಾಸ್ತ್ರೀನ ಸಲಹೆ ಕೇಳಿದರೋ ಕಾಣೆ – ಹೆಸರಿಟ್ಟರು ನಂ ಮನೇಗೆ – 'ವಲ್ಮೀಕ ವ್ಯೂ' ಅಂತ! ಅಂದ್ರೆ – ಕಣ್ಬಿಟ್ಟಾಗೆಲ್ಲ ಹುತ್ತ ಕಣ್ಣಿಗೆ ಕಾಣಿಸಿಕೊಳ್ಳುತ್ತೆ ಅಂತ. ಅದೇನೋ ಸರೀನೇ ಆದರೂ, ಮನೇ ಮುಂದಿನ ಗೋಡೆ ಮೇಲೆ ಹಾಗಂತ ಹೆಸರು ಬರೆಯೋವಾಗ – ಅದೇನು ಅವರ ತೋಳೇ ಸೋತಿತೋ, ಅಥವಾ ತಂದಿದ್ದ ಇದ್ದಿಲ ಚೂರೇ ತೀರಿಹೋಯಿತೋ, ಇಲ್ಲವೆ ಆ ಮರ್ಕಟ ಬುದ್ಧಿ ಅಷ್ಟರಲ್ಲಿ ಇನ್ನು ಯಾವುದಕ್ಕೆ ಹಾರಿತೋ – ಅಂತೂ 'ವಲ್ಮೀಕ' ಅಂತ ಅಷ್ಟು ಬರೆಯೋ ವೇಳೆಗೇ ನಿಂತು ಹೋಯ್ತು. ಅದನ್ನ ಆ ಹುಡುಗರು ಅಲ್ಲಿಗೇ ಬಿಟ್ಟಹಾಗೇನೇ ನಂ ಆಕೇನೂ ಅಲ್ಲಿಗೇ ಬಿಟ್ಟಿದ್ದಿದ್ರೆ ಚೆನ್ನಾಗಿರ್ತಿತ್ತು. ಆದರೆ ಆಕೆ ಹಾಗೆಲ್ಲಾ ಅಲ್ಲಿಗೇ ಬಿಡೋ ಜಾತಿ ಅಲ್ಲ.

ನಾನು ಹೊಟ್ಟೆಪಾಡಿಗೆ ಏನೋ ಅವರಿವರು ಮಾಡು ಅಂದದ್ದನ್ನ ಕೈಲಾದಷ್ಟು ಮಾಡತಾ ಇದ್ದರೂ, ನನ್ನ ಪಾಡಿಗೆ ನನಗೇನು ಬೇಕೋ ಅದನ್ನ ರಾಮು-ಕೃಷ್ಣ ಅಂದುಕೊಂಡು ಮಾಡಿಕೋತಿರತೀನೆ. ಅಂದರೆ, ಇವೊತ್ತಿನ ಅನೇಕರ ಹಾಗೆ, ನಾನೂ ಒಬ್ಬ ಬರಹಗಾರ, ನಾನು ಪ್ರಸಿದ್ಧನಲ್ಲದೆ ಇರಬಹುದು, ನನ್ನದು ಅಮರ ಕಲಾಕೃತಿ ಅಲ್ಲದಿರಬಹುದು. ನಾನು ನೆಟ್ಟದ್ದು ಮೈಲಿಕಲ್ಲು ಆಗದೆ ಹೋಗಬಹುದು. ಆದರೂ ನಾನೇನೂ ಹಾಗೆಂದು ಯಾವತ್ತೂ ನನ್ನ ಪುಸ್ತಕದ ಮುನ್ನುಡೀಲಿ ಕೊಚ್ಚಿಕೊಂಡಿಲ್ಲ; ಇತರರಿಗೆ ಕಾಫಿ ಸಿಗರೇಟು ಕುಡಿಸಿ ಹೇಳಿಸಿಕೊಂಡಿಲ್ಲ. ಇಂಥ ಹಸು ಸಾಧುವಾದ ಪ್ರಾಣಿಯಾದ ನನ್ನ, 'ಮುಂದೆ ಬಂದರೆ ಹಾಯಬೇಡಿ-ಹಿಂದೆ ಬಂದರೆ ಒದೆಯಬೇಡಿ' ಅಂತ ನನ್ನ ಪಾಡಿಗೆ ನಾನು 'ಬಂದು ಬಳಸಿ ಅಡ್ಡಗಟ್ಟಿ' ಬದುಕುತಾ ಇರೋ ನನ್ನ,-ನನ್ನ ಮಕ್ಕಳು ಬುದ್ಧಿಯಿಲ್ಲದೆ ಮನೆಗೆ 'ವಲ್ಮೀಕ' ಅಂತ ಹೆಸರಿಟ್ಟರೆ, ನನ್ನ ಹೆಂಡತಿ ಮನೆಗೆ ಯಜಮಾನನಾದ ನನಗೇ 'ವಾಲ್ಮೀಕಿ' ಅಂತ ಹೆಸರಿಡೋದು, ಹಾಗಂತ ಕರೆದು ಹಾಸ್ಯಮಾಡೋದು - ಇದು ಯಾವೂರ ನ್ಯಾಯ ಅಂತ ಕೇಳ್ತೀನೆ?

ಆದರೆ ಈ ಸಣ್ಣ, ಚಿಲ್ಲರೆ, ಜುಜುಬಿ ಒದ್ದಾಟ ಹೇಳೋಕಲ್ಲ ಹೊರಟದ್ದು ನಾನು. ಅವುಡು ಕಚ್ಚಿಕೊಳ್ಳೊ 'ಪ್ರೊದ್ದಾಟ' ಅಂದೆನಲ್ಲಾ, ಅದನ್ನ ಹೇಳೋಕೆ ಹೊರಟದ್ದು.

ಒಂದು ದಿನ, ಯಥಾಪ್ರಕಾರ, ಕೆರಿಕತಾ ಇದ್ದೇನೆ. ಬಂತು - ಅಮ್ಮಾವರ ಸವಾರಿ.

"ಏನು ವಾಲ್ಮೀಕಿಗಳೇ, ಇವತ್ತೇನು ನಿಮ್ಮ ರಾಮಾಯಣ?"

"ಶ್! ಆಚೆ ಹೋಗು, ಶೂರ್ಪನಖಿ."

"ಹೋಗ್ತೀನೆ. ಅಡಿಗೆ ಏನು ಮಾಡಲಿ ಅಂತ ಕೇಳೋಕೆ ಬಂದೆ."

"ನಿಂಗೆ ಖುಷಿ ಬಂದದ್ದು ಮಾಡು, ಹೋಗು."

"ಬೆಂಡೆಕಾಯಿ ಗೊಜ್ಜು ಮಾಡಲಾ?"

"ಬೆಂಡೆಕಾಯಿ ಮಂಡೇಗೆ ಒಳ್ಳೇದಂತೆ. ಮಾಡು."

"ಗೊಜ್ಜಿಗೆ - ಬೆಲ್ಲ ಮುಗಿದುಹೋಗಿದೆಯಲ್ಲ?"

"ಹಾಗಾದ್ರೆ - ಸಣ್ಣಗೆ ಹಚ್ಚಿ ಪಲ್ಯ ಮಾಡಿಬಿಡು."

" ಪಲ್ಯ ಮಾಡಿದ್ರೆ – ಅಷ್ಟು ಬೆಂಡೇಕಾಯಿ – ಎಲ್ಲರಿಗೂ ಸಾಕಾಗುತ್ಯೆ ?"

" ಸರಿ. ಹಾಗಾದ್ರೆ, ನೀರಾಗಿ ಹುಳಿ ಮಾಡಿಬಿಡು."

" ಥೂ! ಇದೇನು ದಿನಾನೂ ? ನಿನ್ನೆ ತಾನೆ ಹುಳಿ ತಿನ್ಲಿಲ್ವೆ ?"

" ಸರಿ. ನಿಂಗೆ ಏನು ಬೇಕೋ ಅದನ್ನ ಮಾಡಿಬಿಡು, ಮಹರಾಯಿತಿ."

" ಬೇಡ ಅಂದ್ರೆ. ಈರುಳ್ಳೀದು ಹುರಿದ ಪಲ್ಯ ಮಾಡಿಬಿಡತೇನೆ."

" ಮಾಡು. ಬೇಕಾದರೆ ಮಾಡಿಯೇಬಿಡು."

" ಅಂದ ಹಾಗೆ, ಹುರಿಯೋ ಬಾಣಲೆ ತೂತು ಅಂತ ಒಂದು ತಿಂಗಳಿಂದ ಹೇಳತಾ ಇದ್ದೇನೆ!"

" ನೆನ್ನೆ ಅದಕ್ಕೆ ಹೊಸ ತಗಡು ಹಾಕಿ ತಂದಿಟ್ಟದೇನೆ, ನೋಡು."

" ತಂದದ್ದು ಹೇಳಲೇಬೇಡವೆ ನನಗೆ ?....ಆದರೆ, ಹುರಿದದ್ದು ಕರಿದದ್ದು ತಿನ್ನಬೇಡಿ ಅಂತ ಡಾಕ್ಟರ್ ಅಂದಹಾಗಿತ್ತಲ್ಲಾ ನಿಮಗೆ ?"

" ಹುಂ, ಅಂದಹಾಗಿತ್ತು. ಅದಕ್ಕೇ ಹುರೀದೆ ಕರೀದೆ ಏನಾದರೂ ಮಾಡಿ ಬಡಿಸು."

" ಅದು ಏನು ಮಾಡಿ ಬಡಿಸೋದೋ ನನಗೊಂದೂ ತೋಚೋಲ್ಲ.... ಹೋಗಲಿ, ತೆಪ್ಪನೆ ಇಷ್ಟು ಚಟ್ನಿ ಅರೆದುಬಿಡುತೀನಿ, ಸಾಕಲ್ಲಾ ?"

" ಸಾಕು ? ಬೇಕಾದಷ್ಟಾಯ್ತು. ಮೊದಲು ಹೋಗಿ ಅರೆ. ಸುಮ್ಮನೆ ನನ್ನ ಯಾಕೆ ಅರೀತೀಯ ?"

" ಯಾವ ಚಟ್ಣಿ ಅರೀಲಿ, ಅಂದ್ರೆ ?"

" ಯಾವುದಾದರೂ. ನಿಂಗೆ ಬೇಕಾದ್ದು."

" ನಂಗೆ ಬೇಕಾದ್ದು ಅಂದ್ರೆ ? ಕೊತ್ತುಂಬರಿ ಚಟ್ಣಿ ?"

" ಹುಂ."

" ಹುಂ ಅನ್ನೋಕೇನು ನಿಮ್ಗೆ ? ಸದ್ಯ ಮೆಣಸಿನಪುಡಿಗೆ ಕೊತ್ತುಂಬರಿ ಸಿಕ್ಕಿದರೇ ಸಾಕಾಗಿದೆ....ತಣ್ಣಗೆ ಒಂದಿಷ್ಟು ಪುದೀನಾ ಮಾಡಿಬಿಡತೇನೆ, ನೆಂಚಿಕೊಳ್ಳೋಕೆ."

" ಒಳ್ಳೇದು. ಹಾಗೇ ಮಾಡು."

" ಪುದೀನಾ ನಿಮ್ಮ ಮೈಗಾಗುತ್ಯೆ ? ಮೊನ್ನೆ ಎಲ್ಲಾ ಉಷ್ಣ ಅಂತಿದ್ರಿ ?"

" ನೋಡು – ನನಗೆ ಕೆಲಸ ಇದೆ – ಹೊತ್ತಾಯ್ತು...."

"ನನಗೇನಿಲ್ವೆ? ಅದಕ್ಕೇ – ಬೇಗ ಹೇಳಿ, ಮತ್ತೆ....ಸರಿ, ಯಾವ್ದೂ ಬೇಡ. ಬದನೇಕಾಯಿ ಎಣ್ಗಾಯಿ ಮಾಡಿಬಿಡತೀನಿ."

"ಅದೇ ಮಾಡು. ಎಣ್ಗಾಯಿ ತಿಂದು ತುಂಬಾ ದಿನ ಆಗಿತ್ತು."

"ಅಯ್ಯೋ ನನ್ನ ಬುದ್ಧೀನೆ? ನಿಮ್ಮ ಜೊತೇಲಿದ್ದು ನನ್ನ ಆಚಾರ ಎಲ್ಲಾ ಹಾಳೇ ಆಗೋಯ್ತು. ಇವತ್ತು ಏಕಾದಶಿ ಅಲ್ವೇ ಅಂದ್ರೆ? ಬದನೆಕಾಯಿ ಮಾಡಬಹುದೆ?"

"ನೋಡು ಮಾರಿ – ಅಲ್ಲ, ಮರಿ. ಇವತ್ತು ಹೇಗೂ ಏಕಾದಶಿ. ತೆಪ್ಪಗೆ ಉಪವಾಸ ಇದ್ದುಬಿಡೋಣ, ಬಿಡು"

"ಓಹೋ! ಇರಬಹುದು! ನಿಮಗೇನು? ವಾಲ್ಮೀಕಿಗಳಲ್ಲವೆ? ವಾಯು ಭಕ್ಷಣ ಮಾಡ್ತೀರಿ ನೀವು ನನಗೆ?"

"ನನ್ನ ನನ್ನ ಪಾಡಿಗೆ ಬಿಟ್ಟುಬಿಟ್ಟು, ನೀನು ನಿನ್ನ ಮಕ್ಕಳು ಎಲ್ಲಾ ಸರ್ವಭಕ್ಷಣ ಮಾಡಿ. ಸರಿಯಾ?"

"ಏನು ಸರ್ವಭಕ್ಷಣ ಮಾಡೋದು? ಬೆಂಡೇಕಾಯಿ ಬಲಿತುಹೋಗಿದೆ. ಈರುಳ್ಳಿ ಇಲಿ ಕಚ್ಚಿಹಾಕಿದೆ. ತೆಂಗಿನಕಾಯಿ ಮುಗ್ಗುಲುವಾಸನೆ. ಪುದೀನಾ ತರೋಣ ಅಂದ್ರೆ, ಪಾರ್ವತಮ್ಮನೋರ ಮನೆಗೆ ಬೀಗ ಹಾಕಿದೆ. ಬೇಳೆ ಮುಗಿದು ಏಳು ದಿನ ಆಯ್ತು. ನನಗೇನು ಹೋಗಬೇಕು – ಬೆಲ್ಲ ಇಲ್ಲದೆ ಇಷ್ಟು ಗೊಡಸಾರು ಕಾಸತೇನೆ, ಹೋಗಿ!"

ಈ ಭಾಗ್ಯಕ್ಕೆ ಇಷ್ಟು ಚರ್ಚೆಯೇ ಅನ್ನತೇನೆ! ಯಾರಿಗೆ ಹೇಳಿ ಕೊಳ್ಳೋದು? ಬಿಟ್ಟ ಬಾಯಿ ಬಿಟ್ಟ ಹಾಗೆ ನೋಡಿದೆ ಯಾರ ಮೇಲೆ ರೇಗುವುದು? ನನ್ನ ಆವುಡು ನಾನೇ ಕಚ್ಚಿಕೊಂಡೆ. ಆಗ ನನಗೆ ನನ್ನ ಸ್ಥಿತಿ ವೇದ್ಯವಾಯಿತು: ಇದು ವಾಲ್ಮೀಕಿಯ ಒದ್ದಾಟವಲ್ಲ, ಇದು ವಾಲ್ಮೀಕಿಯ 'ಪೊದ್ದಾಟ' ಎಂದು.

ಕಟ್ಟಿಕೊಂಡಾಯಿತು. ಅನುಭವಿಸುತ್ತಿದ್ದೇನೆ.

# ಪರಗತಿಯ ಪಾಡು

" ಏ! ಏ! ನೀ ಯಾರು ?"

" ನಾನೊಂದು ಹಕ್ಕಿ."

" ಹಕ್ಕಿ ? ಎಂಥ ಹಕ್ಕಿ ?"

"' ಪರಗತಿ ' ಅಂತ ನಾನೊಂದು ಹೊಸ ಪಕ್ಷಿ."

" ನಿನ್ನ ಮೈ ಯಾಕೆ ಹೀಗಿದೆ ?"

" ನಿನ್ನ ಕಣ್ಣು ಹೀಗೆ ವಿಚಿತ್ರವಾಗಿರುವುದೇಕೆ ?"

" ನಿನ್ನ ಕೊಕ್ಕೇಕೆ ಹೀಗೆ ?"

" ನಿನ್ನ ಪುಕ್ಕ ?"

" ನಿನ್ನ ಕಾಲು ?"

" ನಿನ್ನ ತಲೆ ?"

ಒಂದೊಂದು ಹಕ್ಕಿಯೂ ಒಂದೊಂದು ಪ್ರಶ್ನೆಯ ಬಾಣವನ್ನು ತನ್ನ ಬಾಯ ಬಿಲ್ಲಿನಿಂದ ಎಸೆಯಿತು.

ಯಾರು ಏನು ಪ್ರಶ್ನೆ ಕೇಳಿದರೂ, ಹೊಸ ಹಕ್ಕಿ " ನಂಗೊತ್ತಿಲ್ಲ - ನಂಗೊತ್ತಿಲ್ಲ " ಎಂದು ಒಂದೇ ಉತ್ತರದ ಗುರಾಣಿ ಎತ್ತಿ ಹಿಡಿಯುತ್ತಿತ್ತು.

" ಗುಬ್ಬಚ್ಚೀನ ಅಣಕಿಸೋಕೋಸ್ಕರ ಮೈನ ಇಷ್ಟು ಸಣ್ಣ ಮಾಡಿ ಕೊಂಡಿದೆ " ಎಂದಿತು ಕೋಳಿ.

" ಗೂಬೇತಲೇಮೇಲೆ ಗೂಬೆ ಕೂರಿಸಬೇಕೂಂತ ಕಣ್ಣನ್ನ ಹೀಗೆ ಗೂಬೆ ಕಣ್ಣು ಮಾಡಿಕೊಂಡಿದೆ " ಎಂದಿತು ಕೆಂಬೂತ.

" ಗಿಣೀನ ಹೀಯಾಳಿಸೋಕೋಸ್ಕರ ತನ್ನ ಮೂಗನ್ನ ಹೀಗೆ ಗಿಣಿ ಹಾಗೆ ಬಗ್ಗಿಸಿಕೊಂಡಿದೆ " ಎಂದಿತು ಗುಬ್ಬಚ್ಚಿ.

" ಹದ್ದಿನ ರೆಕ್ಕೆ ಜೊತೇಗೆ ಕೋಳಿಪುಕ್ಕ ಸಿಕ್ಕಿಸಿಕೊಂಡಿರೋದು ನೋಡು! ಹಳೀ ಹಕ್ಕಿಗಳನ್ನೆಲ್ಲ ಹೀಗೆ ಹೀಯಾಳಿಸಬಹುದೆ– ಈಗ ತಾನೆ ಕಣ್ಣು ಬಿಡುತ್ತಿರುವ ಈ ಹೊಸ ಹಕ್ಕಿ?" ಎಂದು ಕೋಪದಿಂದ ಕಣ್ಣು ಕೆಂಪಗೆ ಮಾಡಿಕೊಂಡಿತು, ಕರೀ ಕಾಗೆ.

" ಅಷ್ಟೇ ಅಲ್ಲ. ನವಿಲಿನ ಹಾಗೆ ತಲೇ ಮೇಲೆ ಮೂರು ಜುಟ್ಟು ನೆಟ್ಟು ಕೊಂಡಿರೋದು ನೋಡು " ಎಂದಿತು ಗೂಬೆ.

ಅನ್ನುವುದಕ್ಕೆ ಇನ್ನೇನೂ ಉಳಿಯದೆ, ಹೇಳಬೇಕಾದ್ದೆಲ್ಲ ಮುಗಿದು ಹೋದ ಮೇಲೆ, ಎಲ್ಲವೂ ಗುಂಪಾಗಿ ಗಿಳಿಯ ಹತ್ತಿರ ಹೋಗಿ ಚಾಡಿ ಹೇಳಿದುವು; ಗಿಳಿ ಕೇಳಲಿಲ್ಲ. ನವಿಲಿನ ಹತ್ತಿರ ಹೋಗಿ ಹೇಳಿದುವು; ನವಿಲು ನಕ್ಕುಬಿಟ್ಟಿತು. ಹದ್ದಿನ ಹತ್ತಿರ ಹೋಗಿ ಹೇಳಿದುವು; ಹದ್ದು ಅವುಗಳನ್ನ ಹೆದರಿಸಿ ಓಡಿಸಿಬಿಟ್ಟಿತು.

ಹೀಗೆ, ಹೋದ ಮೂರು ಕಡೆಯೂ ಮಂಗಳಾರತಿ ಆದರೂ ಆ ಹಕ್ಕಿಗಳ ಗುಂಪಿಗೆ ಬುದ್ಧಿ ಬರಲಿಲ್ಲ. " ಈ ಹೊಸ ಹಕ್ಕಿಯನ್ನು ಹೇಗಾದರೂ ನಾವೇ ಧ್ವಂಸ ಮಾಡಿಬಿಡಬೇಕು " ಎಂದು ಅದರ ಮೇಲೆ ಒಟ್ಟಾಗಿ ಬಿದ್ದುವು.

ಬಿದ್ದದ್ದೆ ತಡ—

ಗುಬ್ಬಚ್ಚಿಗೆ ಗೂಬೆಯ ಕಣ್ಣು ಅಂಟಿಕೊಂಡಿತು. ಗೂಬೆಗೆ ಗಿಣಿಯ ಮೂಗಾಯಿತು. ಕೋಳಿಗೆ ಗುಬ್ಬಚ್ಚಿಯ ಮೈ ಬಂತು. ಕೆಂಬೂತಕ್ಕೆ ನವಿಲಿನ ಜುಟ್ಟು ಕಟ್ಟಿಕೊಂಡಿತು. ಕಾಗೆಗೆ ಕೋಳಿಯ ಪುಕ್ಕ ಸಿಕ್ಕಿಕೊಂಡಿತು.

ಪರಗತಿ ಪಕ್ಷಿ ಹೀಗೆ ಮಾಯವಾಯಿತು. ವಿಶಾಲವಾದ ಎರಡು ಹದ್ದಿನ ರೆಕ್ಕೆ ಮಾತ್ರ ಅಲ್ಲಿ ಉಳಿದುಕೊಂಡಿತು.

# ನಾನು ನೋಡಿದ ಸಿನಿಮಾ

ನಾನು ಒಂದು ಸಿನಿಮಾ ನೋಡಿದೆ.

ಒಬ್ಬ ಮನುಷ್ಯ – ಸುಮಾರು ನಾಲ್ಕೂವರೆ ಅಡಿ ಎತ್ತರವಿರಬಹುದು – ಕನ್ನಡಿ ಎದುರಿಗೆ ನಿಂತು ತನ್ನನ್ನು ತಾನೇ ನೋಡಿಕೊಳ್ಳುತ್ತಿದ್ದ. ತಾನು ಎವರೆಸ್ಟಿನ ಅವಳಿ, ತಾನೇ ಮನ್ಮಥನ ಮೊಮ್ಮಗ ಅಂತ ಅವನು ತಿಳಿದುಕೊಂಡ ಹಾಗಿತ್ತು.

ದರ್ಶನ ಎಲ್ಲಾ ಮುಗಿದ ಮೇಲೆ, ಸಂತೃಪ್ತಿಯ ಠೀವಿಯಿಂದ ಹೊರಗೆ ಬಂದ. ಅಲ್ಲಿ ಅವನಿಗಿಂತ ಎತ್ತರವಾದವರೂ, ಅವನಿಗಿಂತ ಸ್ಫುರದ್ರೂಪಿಗಳೂ, ಅವನಿಗಿಂತ ಚೆನ್ನಾಗಿ ಅಲಂಕಾರ ಮಾಡಿಕೊಂಡವರೂ ಓಡಿಯಾಡುತ್ತಿದ್ದರು. ಹಿಂದೆ, ಅವನು ಒಂಟಿಯಾಗಿ ಓಡಿಯಾಡುತ್ತಿದ್ದಾಗ, ಅವನೇ ಮಹಾಮೈಲಿ ಎಂದು ಅವನಿಗೆ ಮರ್ಯಾದೆ ಮಾಡುತ್ತಿದ್ದವರ ಕಣ್ಣಿಗೆ ಅವನು ಅಂಗುಲಕ್ಕಿಂತ ಅಲ್ಪವಾಗಿಹೋದ.

ಆದರೆ ದೇವರು ಅವನಿಗೆ ಬುದ್ಧಿ ಕೊಟ್ಟಿದ್ದ. ತನ್ನ ಬೂಟ್ಸಿನ ಕೆಳಭಾಗಕ್ಕೆ ದಪ್ಪ ದಪ್ಪ ಅಟ್ಟೆ ಹಾಕಿಸಿ, ತಲೆಯ ಮೇಲೆ ನೊಳದುದ್ದ ಟೋಪಿ ಸಿಕ್ಕಿಸಿ, ಎತ್ತರ ಏರಿಸಿಕೊಂಡ. ಬಣ್ಣ ಬಣ್ಣ ಬಳಿದುಕೊಂಡು, ರೂಪು ರಂಗಾಯಿಸಿ ಕೊಂಡ ಎರವಲು ಬಟ್ಟೆ ತಂದು ಹೊಸ ಹೊಸ ಅಲಂಕಾರ ಮಾಡಿಕೊಂಡ. ಓ, ಮೆರವಣಿಗೆ ಮೆರೆದ!

ಆದರೇನು? ಮೆರವಣಿಗೆಯ ಮತಾಪು ಮೂರು ಗಳಿಗೆ ಮಾತ್ರ. ಅದುವರೆಗೆ ಅವನ ಎತ್ತರ ಕಾಣದಿದ್ದವರು ಮೊದಲು ಕಣ್ಣು ಬಾಯಿ ಬಿಟ್ಟರು. ಗಾಳಿ ಬಂತು, ಮಳೆ ಬಂತು, ಧೂಳು ಬಂತು; ಬಳಿದ ಬಣ್ಣ ಕೊಚ್ಚಿ

ಹೋಯಿತು, ಉಳಿದ ಬಣ್ಣ ಕೊಚ್ಚೆಯಾಯಿತು. ಎರವಲು ಬಟ್ಟೆ ತಾನೇ ಎಷ್ಟು ದಿನ ಎಗರಾಡೀತು? ಕೆರೆಯ ನೀರು ಕೆರೆಗೇ ಕೊನೆಗೆ!

ಆಗರೆ – ದೇವರು ಅವನಿಗೆ ಬುದ್ಧಿ ಕೊಟ್ಟಿದ್ದ. ನಾಲ್ಕು ಅಡಿಗಿಂತ ಕಡಮೆ ನಿಂತ ನಾಲ್ಕು ಜನರನ್ನು ಕರೆದ. 'ನನ್ನ ತಲೆ ನೋಡಿ' ಎಂದ. ನೋಡಲು ಮುಖ ಮೇಲೆ ಎತ್ತಿದವರ ಕಣ್ಣಿಗೆ ಮಣ್ಣು ಹಾಕಿದ. ಮೊಂಡು ಮೂಗರು ಮೂವರನ್ನು ಹಿಡಿದ. ತನ್ನ ಸುಹಾಮೂಗು ತೋರಿಸಿದ. 'ನನ್ನ ಮೂಗು ನೇರಕ್ಕೆ ಬಂದರೆ ಮಾತ್ರ ನಿಮಗೆ ಮುಕ್ತಿ' ಎಂದ. 'ನಮಗೆ ಹಳೆಯ ಬಟ್ಟೆ ಬೇಡ, ನಮಗೆ ಹೊಸ ಬಟ್ಟೆ ಬೇಕು' ಎಂದು ಹೊಸ ಗೀತೆ ಹಾಡಿದ. 'ನನ್ನ ಬಟ್ಟೆ ನೀವು ಹಿಡಿಯಿರಿ' ಎಂದು ಅನುಗೀತೆ ಹಾಡಿದ. ತನ್ನ ಹರಕು ಹೊಲಸು ಬಟ್ಟೆಗಳನ್ನು ಅವರಿಗೆ ಹೊದಿಸಿದ.

ಸುತ್ತ ನೋಡಿದ. ಎಲ್ಲರೂ ತನಗಿಂತ ತಗ್ಗಿನವರೇ! ಎಲ್ಲರೂ ತನಗಿಂತ ಕುರೂಪಿಗಳೇ! ಎಲ್ಲರೂ ತನಗಿಂತ ದರಿದ್ರರೇ! ತನ್ನ ಔನ್ನತ್ಯಕ್ಕೆ, ತನ್ನ ಸೌಂದರ್ಯಕ್ಕೆ, ತನ್ನ ಪರಮಾಧ್ಯಕ್ಷಪದಕ್ಕೆ ತಾನೇ ಹಿರಿಹಿರಿ ಹಿಗ್ಗಿಹೋದ.

ಇದು ನಾನು ನೋಡಿದ ಸಿನಿಮಾ ಕಥಾಸಾರಾಂಶ.

ಮುಂದೆ – ಇದ್ದಕ್ಕಿದ್ದಂತೆ, ಕ್ರಮಕ್ರಮವಾಗಿ ಆ ಹಿರಿಹಿರಿ ಶಬ್ದ ವಟವಟವಾಯಿತು. ಬರುಬರುತ್ತ ಆ ವಟವಟಕ್ಕೆ ಒಂದು ಗುಂಯ್‌ಗುಂಯ್ ಗಾನ ಹಿಮ್ಮೇಳವಾಗಿ ಬೆಳೆದು ಸೇರಿತು. ಒಂದೆರಡು ಕ್ಷಣದಲ್ಲೆ ಆ ವಟವಟ ಗುಂಯ್‌ಗುಂಯ್ ಶಬ್ದದಾಂಪತ್ಯದ ಹಿಂದೆ ತಿದಿಯೊತ್ತಿದಂತೆ ಭುಸ್‌ಭುಸ್ ಪ್ರಾರಂಭವಾಯಿತು. ಆ ಶಬ್ದಬ್ರಹ್ಮದ ಗರ್ಭದಿಂದ ರಜತ ಪರದೆಯ ಮೇಲೆ ಒಂದು ಬಾಲ ಪ್ರಸವವಾಯಿತು. ಬಾಲ ಮೈಯಾಯಿತು. ನೀರಿಲ್ಲದ, ನೆರಳಿಲ್ಲದ ನೆಲೆಯಲ್ಲಿ ತಾನು ಗೂಳಿಯಂತೆ ಗುಟುರು ಹಾಕುವೆನೆಂದು ಭ್ರಮಿಸಿ, ವಟವಟಗುಡುತ್ತಿದ್ದ ಒಂದು ಊದಿದ ಕಪ್ಪೆ ಕಂಡುಬಂತು. ಅದರ ಸುತ್ತ ಕರಿಯ ಪ್ರಭಾವಲಯದಂತೆ ಸೊಳ್ಳೆಗಳ ಸಾಲುಮಾಲೆ 'ಜಯ ಹೇ ಭಾರತ ಭಾರವಿಧಾತಾ' ಹಾಡಿಕೊಂಡು ಸುತ್ತ ಸುತ್ತುತ್ತಿದ್ದುವು! ಅದೆಲ್ಲದರ ಹಿಂದೆ ಒಂದು ಮಹಾಘಟಸರ್ಪ ಹೆಡೆಯೆತ್ತಿ, ಬಿಚ್ಚಿ, ಬುಸುಗುಡುತ್ತಿತ್ತು.

ಸಿನಿಮಾ ಮುಗಿಯಿತು. ಜನ ಎದ್ದು ಹೊರಟರು.

# ಅಷ್ಟೇ ವ್ಯತ್ಯಾಸ

ನಾನೊಬ್ಬ ಸ್ಕೂಲು ಮೇಷ್ಟರು. ಮೊನ್ನೆ ನನ್ನ ಜೊತೆಯ ಉಪಾಧ್ಯಾಯರ ಸಂಗಡ ಉಪಾಧ್ಯಾಯರ ಕೊಠಡಿಯಲ್ಲಿ ಮಾತನಾಡತಾ ಕುಳಿತಿದ್ದೆ. ಇವನ ಯೋಗ್ಯತೆ, ಅವನ ಯೋಗ್ಯತೆ ಅಂತ ಯಾರೋ ಇಬ್ಬರಿಗೆ ಗ್ರಹಚಾರ ಬಿಡಿಸುತಾ ಇದ್ದೆವು. ಮಧ್ಯೆ ಜವಾನ ಬಂದು, 'ಸ್ವಾಮಿ, ಸಾಹೇಬರು ಕರೀತಾರೆ, ಬನ್ನಿ' ಅಂತ ನನ್ನ ಕರೆದ. ನಾನು ಮೇಜಿನ ಬೀಗ ಹಾಕಿ, ಬೀಗದ ಕೈ ಕೈಯಲ್ಲಿ ಹಿಡಿದುಕೊಂಡು, ಹೆಡ್ಮಾಸ್ಟರವರ ಆಫೀಸಿಗೆ ಹೋದೆ.

"ಕೂತುಕೊಳ್ರಿ, ಒಂದು ನಿಮಿಷ. ಈ ಫೈಲ್ ಮುಗಿಸಿಬಿಟ್ಟು ಬಂದೆ." ಅಂದರು ಹೆಡ್‌ಮಾಸ್ಟರು. ನಾನು ವಿಧೇಯನಂತೆ ಎದುರು ಕುರ್ಚಿಯಲ್ಲಿ ಕುಳಿತೆ.

× × × ×

"ಅವನೇ ಕೂತುಕೊಂಡನಂತೆ, ನಿನಗೇನು ಸಂಕೋಚ? ಬಾ. ಅವನು ಕುರ್ಚಿಯ ಮೇಲೆ ಕೂತರೆ, ನೀನು ಮೇಜಿನ ಮೇಲೆ ಬಿದ್ದುಕೊ" ಎಂದು ಯಾರೋ ಹೇಳಿದ ಹಾಗಾಯಿತು.

ಯಾರು? ಎಂದು ನೋಡಿದೆ. ಮೇಜಿನ ಮೇಲೆ ಹೆಡ್‌ಮಾಸ್ಟರವರ ಬಲಗೈ ಆಚೆ ಬಿದ್ದಿದ್ದ ಆಫೀಸ್ ಕಬ್ಬಿಣದ ಪೆಟ್ಟಿಗೆಯ ಬೀಗದೆಸಳು ಹಾಗೆ ಮಾತನಾಡಿದ್ದು! ಯಾರನ್ನ ಅದು ಹಾಗೆ ಮಾತನಾಡಿಸಿದ್ದು? ಅಂತ ನಾನು ಯೋಚಿಸುವಷ್ಟರಲ್ಲಿ ಕೈಯಲ್ಲಿದ್ದ ನನ್ನ ಮೇಜಿನ ಬೀಗದೆಸಳು ನನ್ನ ಬೆರಳುಗಳ ಮಧ್ಯದಿಂದ ನುಸುಳಿಕೊಂಡು ಮೇಜಿನ ಮೇಲೆ ತಾನೂ ಮಲಗಿಕೊಂಡಿತು! ಆಶ್ಚರ್ಯದಿಂದ ಮೂಕನಾಗಿ ಬೆಪ್ಪನಂತೆ ಕುಳಿತುಕೊಂಡೆ.

"ಏನು ಸಮಾಚಾರ?" ಎಂದಿತು ಹೆಡ್‌ಮಾಸ್ತರವರ ಬೀಗದ ಕೈ.

"ನಾನು ಏನು ಹೇಳಲಿ? ನಿನ್ನನ್ನ ಒಂದು ಮಾತು ಕೇಳಬೇಕು ಅಂತ ಬಹಳ ದಿವಸದಿಂದ. ಈ ಹೆಡ್‌ಮೇಷ್ಟರು ನಿನ್ನನ್ನು ಒಂದು ಕ್ಷಣವಾದರೂ ಆಚೆ ಈಚೆ ಹೋಗೋಕೆ ಬಿಡೊಲ್ಲವಲ್ಲ, ನಿನಗೆ ಬಹಳ ಬೇಜಾರಾಗೋದಿಲ್ಲವೆ? ಈಗ–ನಮ್ಮ ಈ ಇವನು ಇದ್ದಾನೆ ನೋಡು, ಎಲ್ಲಿ ಎಂದರೆ ಅಲ್ಲಿ, ಹೇಗೆ ಎಂದರೆ ಹಾಗೆ, ಯಾವಾಗ ಅಂದರೆ ಆವಾಗ ನನ್ನನ್ನ ನನ್ನ ಪಾಡಿಗೆ ಬಿಟ್ಟು ಬಿಡುತ್ತಾನೆ. ಅಲ್ಲ, ಭಾರತೀಯರಿಗಂತೂ ಬಂಧನ ಬ್ರಹ್ಮ ಬರೆದದ್ದು ಅಂದರೆ, ನಮಗೆ ಬೀಗದ ಕೈಗಳಿಗೂ ಅದೇ ಹಣೇಬರಹಾನೆ? ಏನು ಸಮಾಚಾರ ಅಂತ ನೀನು ಹೇಳಬೇಕು ನನಗೆ" ಎಂದಿತು ನನ್ನ ಬೀಗದ ಕೈ.

'ಎಲಾ ಇದರ!' ಎನ್ನಿಸಿತು ನನಗೆ. "ಇದು ಅದನ್ನ ಮಾತನಾಡಿಸುವ ಹಾಗೆ ನಾನು ಬೇರೆ ನಮ್ಮ ಹೆಡ್‌ಮಾಷ್ಟರನ್ನು ಈ ಜನ್ಮದಲ್ಲಿ ಮಾತನಾಡಿಸುವ ಹಾಗಿಲ್ಲ" ಎಂದುಕೊಂಡೆ.

ಹೆಡ್‌ಮಾಷ್ಟರವರ ಬೀಗದ ಕೈ "ನಿನ್ನ ಮಾತಿನ ಅಬ್ಬರ ಕೇಳಿದರೆ, ನಿಜವೇನೋ ಅಂತ ಭ್ರಮೆ ಆಗಿಬಿಡುತ್ತೆ. ನೀನು ಬುದ್ಧಿವಂತ ಅನ್ನೋದನ್ನ ಒಪ್ಪಿಕೊಂಡೆ. ಆದರೆ ನಿನ್ನನ್ನ ಒಂದು ಪ್ರಶ್ನೆ ಕೇಳತೀನೆ. ನಿನ್ನ ಕೈಯಲ್ಲಿ ಯಾವ ಯಾವ ಮೇಜಿನ ಬೀಗ ತೆಗೆಯೋದಕ್ಕೆ ಆಗುತ್ತೆ? ಸ್ವಲ್ಪ ಹೇಳು" ಎಂದು ಕೇಳಿತು.

"ಇಷ್ಟೇನೆ ಪ್ರಶ್ನೆ? ನಮ್ಮ ಸ್ಕೂಲಿನಲ್ಲಿರುವ ಪ್ರತಿಯೊಂದು ಮೇಜಿನ ಬೀಗಾನೂ ತೆಗೀತೀನಿ, ಬೇಕಾದರೆ, ನಾನು. ನೀನು ಯಾವ ಯಾವ ಬೀಗ ತೆಗೀತೀಯ?"

"ನನ್ನ ಕೈಲಿ ಹೆಚ್ಚು ಆಗೊಲ್ಲಪ್ಪ. ನನ್ನ ಸೃಷ್ಟಿಸಿದವನು ಈ ಒಂದು ಕಬ್ಬಿಣದ ಪೆಟ್ಟಿಗೆ ತೆಗೆಯೋಕೆ ಮಾತ್ರ ನನಗೆ ಶಕ್ತಿ ಕೊಟ್ಟಿದಾನೆ, ಅಷ್ಟೆ."

ಆ ಮಾತು ಕೇಳಿ, ನನ್ನ ಬೀಗದ ಕೈ ನಕ್ಕುಬಿಟ್ಟಿತು. "ಇಷ್ಟೇನೆ!" ಅಂತ ಆ ನಗುವನ್ನ ಒತ್ತಿತು.

ಆ ಇನ್ನೊಂದು ಬೀಗದ ಕೈ ನಗಲಿಲ್ಲ. ಗಂಭೀರವಾಗಿ "ಸರಿಯೆ, ಬೀಗಗಳನ್ನು ತೆಗೆಯುವುದರಲ್ಲಿ ನೀನು ನನಗಿಂತ ಗಟ್ಟಿಗ, ನಿಜ. ಆದರೆ, ಯಾವುಯಾವುದರ ಬೀಗಗಳನ್ನು ನೀನು ತೆಗೆಯುತ್ತೀಯೋ ಆ ಮೇಜುಗಳ

ಒಳಗೆ ಏನೇನಿದೆ ಎಂದು ಏನಾದರೂ ನೀನು ನೋಡಿದ್ದೀಯಾ?" ಎಂದು ಕೇಳಿತು.

ಇದರ ನಗು ತಟಕ್ಕನೆ ನಿಂತಿತು. ಬಹುಶಃ ಇದರ ಕಣ್ಣಿನ ಮುಂದೆ-ಶಾಯಿನ ಬರೆ ಪಡೆದ ಹುಡುಗರ ನೋಟುಪುಸ್ತಕಗಳು, ಹಳೇ ಸಿಬ್ಬುಗಳು, ಸವೆದ ಚಾಕ್ ತುಂಡುಗಳು, ಕಚ್ಚುಬಿದ್ದ ರೂಲುದೊಣ್ಣೆ, ಹತ್ತಾರು ಕಾಳು ಹಳಸಿದ ಅವಲಕ್ಕಿ, ಚೌಚೌ ದೂಳು- ಈ ಎಲ್ಲದರ ಚಿತ್ರ ಸಿನಿಮಾ ಹಾಗೆ ಓಡಿರಬೇಕು. ಬಿದ್ದರೂ ಮೀಸೆ ಮಣ್ಣಾಗಲಿಲ್ಲವೆಂದು ತೋರಿಸಿಕೊಳ್ಳಬೇಕೆಂಬ ಪ್ರಯತ್ನದಿಂದ ಇದರ ಧ್ವನಿ ನಡುಗುತ್ತಿತ್ತು. ಆದರೂ ಧೈರ್ಯಮಾಡಿ, ಬಂಡಾಟದ ಬಾಯಿ ಬಿಚ್ಚಿ, "ಬೀಗ ಹಾಕಬೇಕಾದರೆ ಅದರಲ್ಲಿ ಏನಾದರೂ ಇದ್ದೇ ಇರುತ್ತದೆ. ಪೆಟ್ಟಿಗೆ ಮರದ್ದಾದರೇನು? ಕಬ್ಬಿಣದ್ದಾದರೇನು? ನಿನ್ನ ಪೆಟ್ಟಿಗೆಯಲ್ಲೂ ಏನೋ ಇರುವ ಹಾಗೆ ಅವುಗಳಲ್ಲಿಯೂ ಏನಾದರೂ ಇದ್ದೇ ಇರುತ್ತದೆ! ಹಾಗೆ ನೋಡಿದರೆ, ನಿನ್ನ ಕಬ್ಬಿಣದ ಪೆಟ್ಟಿಗೆಯಲ್ಲಿ ತಾನೆ ಏನು ಮಹಾ ಇರುವುದು?" ಎಂದು ಸಿಡುಗುಟ್ಟಿತು.

"ಮನಸ್ಸಿನ ಹದ ಕೆಟ್ಟಿರುವುದು ಇದರ ಮಾತಿನಲ್ಲೇ ಸ್ಪಷ್ಟವಾಗಿದೆ" ಎಂದುಕೊಂಡು, ಕಬ್ಬಿಣದ ಪೆಟ್ಟಿಗೆಯ ಬೀಗದ ಕೈ, "ಹೋಗಲಿ, ಬಿಡು. ನನ್ನ ಒಳಗಿರುವುದನ್ನು ನಾನೇ ಕೇಳಿದರೆ, ಆತ್ಮಪ್ರಶಂಸೆಯ ದೋಷ ತಾಕೀತು. ಅಲ್ಲದೆ, ಬರಿಯ ಹೇಳಿಕೆಯಿಂದ ಯಾರಿಗೆ ತಾನೆ ನಂಬಿಕೆ ಹುಟ್ಟುತ್ತೆ?" ಎಂದಿತು.

ಇದಕ್ಕೆ ಸಮಾಧಾನವಾಗಲಿಲ್ಲ. 'ಹಾಗಾದರೆ, ಒಳಗೆ ಏನಿದೆ ನೋಡಿದ್ದೀಯಾ? ಎಂದು ಕೇಳಿದ್ದು ಯಾಕೆ?" ಎಂದು ಆಕ್ಷೇಪಿಸಿತು.

"ಇತರ ಜನ ಇದೇ ರೀತಿ ಕೇಳಿದರೂ ಕೇಳಬಹುದು ಎಂಬುದಕ್ಕೋಸ್ಕರ ಕೇಳಿದೆ, ಅಷ್ಟೆ. ಸಿಟ್ಟಾಗಬೇಡ" ಎಂದಿತು ಆ ಬೀಗದ ಕೈ.

ನನ್ನ ಬೀಗದ ಕೈ ತಾನು ಕಳಕೊಂಡಿದ್ದ ನಗೆಯನ್ನು ಮತ್ತೆ ಪಡೆದು, "ಸಿಟ್ಟೆ? ನಿನ್ನ ಮೇಲೆಯೆ? ಅಯ್ಯೋ ಪ್ರಾಣಿ! ನಿನ್ನ ಮಾತು ಕೇಳಿದರೆ ನನಗೆ ನಗು ಬರುತ್ತದೆ. ನಾನು ಈ ಗೋಪಾಳದ ಉಪಾಧ್ಯಾಯನ ಮರದ ಪೆಟ್ಟಿಗೆಯ ಬೀಗದ ಕೈಯಾದರೂ... ನೀನು ಈ ಉಪಾಧ್ಯಾಯರಿಗೆಲ್ಲ ಮುಖ್ಯೋಪಾಧ್ಯಾಯನಾದವನ ಕಬ್ಬಿಣದ ಪೆಟ್ಟಿಗೆಯ ಬೀಗದ ಕೈಯಾಗಿದ್ದರೂ, ನನಗಿರು

ವಸ್ತು ಲೋಕವ್ಯವಹಾರಜ್ಞಾನ ನಿನಗಿಲ್ಲವಲ್ಲಾ! ನಾವು ತೆರೆಯುವ ಪೆಟ್ಟಿಗೆಯೊಳಗೆ ಏನಿದೆ ಎಂದು ಯಾರು ನೋಡುತ್ತಾರೆ? ಆದರೆ ನಾವು ಎಷ್ಟೆಷ್ಟು ಪೆಟ್ಟಿಗೆಗಳನ್ನು ತೆಗೆಯಬಲ್ಲೆವು ಎಂಬುದನ್ನು ಈ ಶಾಲೆಯ ಮಕ್ಕಳು ಕೂಡ ಬಲ್ಲವು!" ಎಂದು ಗಹಗಹಿಸಿತು.

× × × ×

ಮುಂದೆ ಮಾತು ಹೇಗೆ ಬೆಳೆಯುತ್ತಿತ್ತೊ ಕಾಣೆ. ಆ ಹೊತ್ತಿಗೆ ಸರಿಯಾಗಿ ಹೆಡ್‌ಮಾಸ್ಟರು ತಾವು ನೋಡುತ್ತಿದ್ದ ಕೆಲಸ ಮುಗಿಸಿ, "ಏನ್ರೀ, ನಿಮ್ಮನ್ನ ಕರೆಸಿದ್ದು ಇದಕ್ಕೆ. ನೀವೇನೋ ತಮಾಶೆಯಾಗಿ ಬರೀತೀರಂತೆ! ನಮ್ಮ ಸ್ನೇಹಿತರು, ಆ 'ಕೊರವಂಜಿ' ಸಂಪಾದಕರು ನಿಮ್ಮನ್ನ ಕೇಳಿ ಅಂತ ನೆನ್ನೆ ನನಗೆ ಹೇಳಿದರು. ನಿಮಗೇನು – ಕವಿಗಳಿಗೆ? ಇದೋ, ಇಲ್ಲೇ ಕೂತ ಹಾಗೆ, ಈ ಎರಡು ಬೀಗದ ಕೈಗಳ ಮೇಲೇನೇ ಏನಾದರೂ ಕಟ್ಟಿಬಿಡುತೀರಿ. ನೋಡಿ, ನಾಳೆ ಬರುವಾಗ ಏನಾದರೂ ಬರೆದು ತಂದುಕೊಡಿ" ಎಂದರು.

ನಾನೂ ವಿಧೇಯನಾಗಿ "ಆಗಲಿ, ಸಾರ್" ಎಂದೆ.

ಹೆಡ್‌ಮಾಸ್ಟರು ತಮ್ಮ ಬೀಗದ ಕೈಯನ್ನು ಎತ್ತಿಕೊಂಡು, ಹಣದ ಚೀಲದಲ್ಲಿ ಒಂದು ಕಡೆ ಜೋಪಾನವಾಗಿ ಇಟ್ಟುಕೊಂಡರು. ನಾನೂ ನನ ಬೀಗದ ಕೈಯನ್ನು ಎರಡು ಬೆರಳಿನ ನಡುವೆ ಎತ್ತಿಕೊಂಡು ಹೊರಟೆ.

ರಾತ್ರೆ ಇದನ್ನು ಹೀಗೆ ಬರೆದೆ.

# ಜನವರಿ ಇಪ್ಪತ್ತಾರು

ತಾತ ಮನೆಯ ಹಿಂದಿನ ತೋಟದಲ್ಲಿ ನಿಂತು, ನಿಂಬೆಯ ಗಿಡಗಳನ್ನು ನೋಡಿ ನಿಟ್ಟುಸಿರುಬಿಟ್ಟರು

"ಏನು, ಶುದ್ಧ ಕೆಲಸಕ್ಕೆ ಬಾರದ ಹುಡುಗರೋ!" ಎಂದು ಗೊಣ ಗುಟ್ಟಿದರು.

ದೂರದಲ್ಲಿ "ಬೋಲೋ....ಕೀ ಜೈ"ಗಳು ಸುಮ್ಮನೆ ಒಂದರ ಹಿಂದೆ ಒಂದು ಒದೆದುಕೊಂಡು ಬರುತ್ತಿತ್ತು.

"ಸರಿ. ಇಷ್ಟರಲ್ಲಿಯೇ ಆಗಿಹೋಯಿತು ಇವರ ಹಾರಾಟ!" ಎಂದು ಕೊಂಡರು ತಾತ. "ಮನೇ ತುಂಬ ಎಳೇ ನಿಂಬೇಕಾಯಿಗಳು ಸೇರಿಕೊಂಡರೆ, ಗಿಡದಲ್ಲಿ ಹಣ್ಣು ಹೇಗೆ ಹುಟ್ಟೀತು!" ಎಂದು ನಡು ಬಗ್ಗಿದ್ದ ಹಾಗೇ ಕುಳಿತು, ಒಂದು ಪಾತಿ ಕೆದಕತೊಡಗಿದರು,

ಸ್ವಲ್ಪ ಹೊತ್ತಾದ ಮೇಲೆ, ತಾತನ ಒಬ್ಬ ಮೊಮ್ಮಗನೂ ಇಬ್ಬರು ಮರಿ ಮಕ್ಕಳೂ ಬಂದರು.

"ಎಲ್ಲಿ ಹೋಗಿದ್ದಿರೋ?" ಎಂದರು ತಾತ.

"ಇದೇನು ತಾತ, ಹೀಗೆ ಕೇಳತೀ? ಇವತ್ತು ಜನವರಿ ಇಪ್ಪತ್ತಾರಲ್ಲವೆ?"

"ಹೌದು, ಮರತೇಹೋಯಿತು. ಮುದಿ ಆಗತಾ ಬಂದೆ. ನಿಜ, ಇವತ್ತು ಸ್ವಾತಂತ್ರ್ಯಪ್ರತಿಜ್ಞೆಯ ದಿನವಲ್ಲವೆ! ಹೌದು, ಹೌದು, ಮಹಾರಾಯ, ಆ ಪ್ರತಿಜ್ಞೆಯನ್ನು ಬರೆದವನು ದೊಡ್ಡ ಮೇಧಾವಿ ಇರಬೇಕು. ನಮ್ಮ ದೇಶಕ್ಕೆ ಆಗಿರೋ ನಾಲ್ಕು ಅನಾಹುತಗಳು ಯಾವ್ಯಾವುವು ಎಂದಿದ್ದಾನೆ? ಆರ್ಥಿಕ, ರಾಜಕೀಯ, ಸಾಂಸ್ಕೃತಿಕ, ಆಧ್ಯಾತ್ಮಿಕ ಅಂತ ಅಲ್ಲವೆ ಅವನು ಹೇಳಿರೋ ಕ್ರಮ? ಹೇಗಿದೆ ನೋಡಿದೆಯಾ? ತಲೆ ಯಾವುದು, ಬಾಲ

ಯಾವುದು ಅಂತ ಗೊತ್ತು ಅವನಿಗೆ! ಚಿಗುರು, ಕೊಂಬೆ, ದಿಂಡು, ಬೇರು ಹೇಗೆ ಕ್ರಮವಾಗಿ ಬಿಡಿಸಿದ್ದಾನೆ, ನೋಡಿದೆಯ?"

"ಅದನ್ನ ಜ್ಞಾಪಿಸಿಕೊಳ್ಳೋಕೇ, ತಾತ, ನಾವು ಇವತ್ತು ಮೆರವಣಿಗೆ ಹೋದದ್ದು" ಎಂದ ಮೊಮ್ಮಗ.

"ಸರಿ, ಸಂತೋಷಪ್ಪ. ದೇಶದ ಕೆಲಸ. ಆದರೂ, ನಡುವೆ ಇದೊಂದು ಸಣ್ಣದು—ಮನೇ ಕೆಲಸ ಇದೆಯಲ್ಲಪ್ಪ. ನೋಡು, ಅಷ್ಟು ದಿವಸದಿಂದ ಹೇಳತಾ ಇದ್ದೀನೆ. ಈ ನಿಂಬೆ ಗಿಡಕ್ಕೆ ಪಾತಿ ಅಗೆದು, ನೀರು ತೋರಿಸದೆ ಹೋದರೆ, ಈ ವರುಷ ಉಪ್ಪಿನಕಾಯಿಗೆ ಏನು ಗತಿ?"

"ಅಯ್ಯೋ, ಅದಕ್ಕೇನು ಅಜ್ಜ ಇಷ್ಟು ಯೋಚನೆ? ಎಲ್ಲೋ, ಯೆಂಕ? ಆ ಏಣಿ ತೆಗೊಂಡು ಬಾರೊ! ನಾಣಿ, ನೀನು ಹೋಗಿ, ಒಂದು ಬಕೆಟ್‌ನಲ್ಲಿ ನೀರು, ಒಂದು ಹಳೇ ಬಟ್ಟೆ ತೆಕೊಂಡು ಬಾ....ತಂದಿರಾ? ಎಲ್ಲಿ, ಆ ನಿಂಬೆ ಗಿಡಕ್ಕೆ ಏಣಿ ಹಾಕು....ನೀ ಹತ್ತೋ ಮೇಲೆ....ನೀನು ಆ ಬಟ್ಟೆ ಒದ್ದೆಮಾಡಿ ಕೊಡೊ ಅವನ ಕೈಗೆ....ತೆಕೋ ಅದನ್ನ ಜೋಪಾನವಾಗಿ, ಒಂದೊಂದು ಎಲೇನೂ ಎಡಗೈಲಿ ಹಿಡಿದುಕೊಂಡು, ಬಲಗೈ ಒದ್ದೆ ಬಟ್ಟೆಯಿಂದ ಆ ದೂಳು ಹೋಗೋ ಹಾಗೆ ಚೆನ್ನಾಗಿ ಒರಸು....ಅವನು ಅದನ್ನ ಒರಸುತಿರಲಿ....ನೀ ಹೋಗೋ ಒಳಗೆ. ಮೇಜಿನ ಮೇಲೆ ಚಾಕು ಇದೆ, ತೆಕೊಂಡು ಬಾ. ಈ ನಿಂಬೆ ಗಿಡದ ಮುಳ್ಳುಗಳನೆಲ್ಲ ಚೂಪು ಮಾಡಬೇಕು. ಹಾಗೇನೆ ಬರುವಾಗ ಒಂದು ನಾಕು ಚೂರು ಎಮೆರಿ ಕಾಗದ ಎತ್ತಿಕೊಂಡು ಬಾ....ಅದೇ ಕಾಣೊ, ಆ ಉಪ್ಪುಕಾಗದ, ಮರಳುಕಾಗದ, ಅದೇ ಆ ಉಜ್ಜೋಕಾಗದ ಕಣೊ.... ಈ ಮರದ ಮೇಲಿನ ಹಳೇ ಸಿಪ್ಪೇನೆಲ್ಲ ತೆಗೆದು ಫಳಫಳ ಅಂತ... ಹೋಗೋ ಬೇಗ....ಇದು ಯಾಕೆ, ತಾತ? ಕೆಳಗೆ ಕೂತುಕೊಂಡು ಸುಮ್ಮನೆ ಮಣ್ಣು ಕೆದಕತಾ ಇದ್ದೀಯ? ನೀ ಮಲಕ್ಕೊ ಹೋಗು. ನಾವು ನೋಡಿಕೋತೀವೆ ಇದನ್ನ."

ತಾತಾ ಮಾತಾಡಲಿಲ್ಲ. "ಮನೇ ತುಂಬ ಎಳೇ ನಿಂಬೇಕಾಯಿಗಳು ಸೇರಿಕೊಂಡರೆ, ನಿಂಬೇಗಿಡವಲ್ಲಿ ನಿಂಬೇಕಾಯಿಗೆ ಜಾಗಾ ಎಲ್ಲಿ!" ಅಂತ ಗೊಣಗುತಾ, ಬಗ್ಗಿದ ನಡು ಹಾಗೇ ಬಗ್ಗಿಸಿ ಕೂತುಕೊಂಡು, ಪುನಃ ತನ್ನ ಪಾಡಿಗೆ ತಾನು ಪಾತಿಯ ಮಣ್ಣು ಕೆದಕತೊಡಗಿದರು.

"ಮುದುಕ ಆದರೂ, ಮೊಮ್ಮಕ್ಕಳಿಗೆ ಮನೆಯ ಜವಾಬ್ದಾರಿ ವಹಿಸೋಕೆ ಮನಸ್ಸಿಲ್ಲ ತಾತನಿಗೆ!" ಅಂತ ಮೊಮ್ಮಗ ಅಂದ, ಕೊಂಚ ಕೇಳಿಸೋ ಹಾಗೇ.

ತಾತ ತಲೆಯೆತ್ತಿ ನೋಡಿದರು. ಮೊಮ್ಮಗನ ಎಡಗೈಲಿ ಇತ್ತು ಎಮೆರಿ ಕಾಗದ! ಬಲಗೈಲಿ ಇತ್ತು ಚಾಕು! ಮುದುಕ ಗಿಡದ ಬುಡದ ಹತ್ತಿರ ಮಣ್ಣು ಕೆದಕುತಾ ಹಾಗೇ ನಿಟ್ಟುಸಿರುಬಿಟ್ಟರು.

"ಏನು ಹೇಳಿದರೂ ಅಷ್ಟೇ!" ಅಂದರು.

*

# ಬಾಳೆ! ಬಾಳೇ!! ಬಾಳೇ!!!

ಒಂದು ಊರು, ಅಲ್ಲಿ ಒಂದು ತೋಟ. ಅದರಲ್ಲಿ ಒಂದು ಬಾಳೆಯ ಗಿಡ. ಆ ಗಿಡದಲ್ಲಿ ಒಂದು ಮೋತೆ. ಆ ಮೋತೆಯಲ್ಲಿ ನೂರಾರು ಹೂವು.

ಒಂದು ದಿನ, ಎಂಟು ಹತ್ತು ಹೂ ತಮ್ಮತಮ್ಮಲ್ಲೆ ಹೀಗೆ ಮಾತನಾಡಿ ಕೊಂಡವು: "ಎಷ್ಟು ದಿನ ಅಂತ ನಾವು ಈ ಗಿಡದ ಕೊನೆಗೆ ಹೀಗೆ ಅಂಟಿ ಕೊಂಡಿರುವುದು? ಇದೋ ಈ ತರಗೆಲೆಗಳ ಹಾಗೆ, ಅದೋ ಆ ಹಕ್ಕಿಗಳ ಹಾಗೆ, ದೂರದ ಆ ಮೋಡಗಳ ಹಾಗೆ ನಾವು ಸ್ವತಂತ್ರವಾಗಿ ಹಾರಾಡುವುದು ಯಾವಾಗ? ನಾವು ಗಣ್ಯರು ಎನಿಸಿಕೊಳ್ಳುವುದು ಯಾವಾಗ?"

ತರಗೆಲೆಗಳು "ನಮ್ಮ ಹಾಗೆ ಹಾಳಾಗಬೇಕೆಂದು ನಿಮಗೆ ಎಳೆಯರಿಗೆ ಏಕೆ ಈ ದುರ್ಬುದ್ಧಿ?" ಎಂದವು.

ಹಕ್ಕಿಗಳು "ಹೂ ಹಕ್ಕಿಯಾಗಲಾರದು, ಹಕ್ಕಿ ಹೂ ಆಗಲಾರದು. ಆಗದ ಆಸೆಗೆ ಬಾಯಿ ಬಿಡಲಾಗದು" ಎಂದವು.

ಮೋಡಗಳು "ವರ್ಷದ ಬಾಳನ್ನು ಮರೆತು, ನಿಮಿಷದ ಬಾಳಿಗೆ ಬಾಯಿ ಬಿಡುವುದು ಮೂರ್ಖತನ" ಎಂದವು

ಉಳಿದ ಹೂಗಳು "ನಿಮಗಿಂತ ಅನುಭವವುಳ್ಳವರ ಮಾತು ಕೇಳಿ, ಅನ್ಯಾಯವಾಗಿ ಹಾಳಾಗಬೇಡಿ" ಎಂದವು.

ಆದರೆ, ಆ ಎಂಟು ಹತ್ತು ಹೂಗಳಿಗೆ ತಾವು ಹಿಡಿದದ್ದೇ ಹಟ. ಮೊಂಡು ತನ ಮಾಡಿ, ಮೈ ಕೊಡವಿಕೊಂಡು, ತೊಟ್ಟನಿಂದ ಕಳಚಿಬಿದ್ದುವು. "ಇದೋ ಹಾರಿದೆವು" ಎಂದುಕೊಳ್ಳುವಷ್ಟರಲ್ಲಿ ಕೆಳಗಿನ ಕೆಸರಿನಲ್ಲಿ ದೊಪ್ಪೆಂದು ಬಿದ್ದು, ಅಲ್ಲೇ ಗೋಳಾಡಿ, ಅಲ್ಲೇ ಕೊಳೆತು ಗೊಬ್ಬರವಾದವು.

ಉಳಿದ ಹೂವುಗಳು ಕೆಲವು ಕಾಲ ಕಳೆದ ಮೇಲೆ ಹೀಚಾದುವು. ಎಳೆಯ ಹೂಗಳಿಗೆ ಆದ ಗತಿಯನ್ನು ಕಂಡಿದ್ದರೂ ಕೂಡ ಕೆಲವು ಹೀಚುಗಳಿಗೆ "ನಾವು ಈಗಲೇ ಇಲ್ಲಿಂದ ಹೊರಟು, 'ಬಾಳೆ' ಎನ್ನಿಸಿಕೊಳ್ಳಬೇಕು" ಎಂದು ಅತಿ ಆತುರ. ಅವು ಕೂಡ, ಜೊತೆಯ ಹೀಚುಗಳು ಎಷ್ಟು ಬುದ್ಧಿ ಹೇಳಿದರೂ ಕೇಳದೆ, ತಾವು ಕೂಡ ತಾಯಿತೊಟ್ಟಿನ ಸಂಬಂಧವನ್ನು ಬಿಡಿಸಿಕೊಂಡು ಕೆಳಗೆ ಬಿದ್ದುವು.

ಎರಡು ಸಣ್ಣ ಮಕ್ಕಳು ಆ ಹೀಚುಗಳನ್ನು ಆಟದ ಸಾಮಾನೆಂದು ಎತ್ತಿಕೊಂಡು ತಂದಿಟ್ಟುಕೊಂಡವು ಒಂದು ನಿಮಿಷದಲ್ಲೆ ಸಾಕಾಗಿ, ಅದನ್ನು ಆಚೆಗೆ ಎಸೆದುಬಿಟ್ಟವು. ಒಂದು ಕರು ಬಂದು ಅವನ್ನು ತಿಂದು ಹೋಯಿತು.

ಉಳಿದ ಹೀಚುಗಳು ತಕ್ಕಷ್ಟು ಕಾಲ ಕಳೆದ ನೋಲೆ ಚೆನ್ನಾಗಿ ಬಲಿತವು. ತೋಟಗಾರ ಕಾಲಕ್ಕೆ ಸರಿಯಾಗಿ ಬಂದು ಆ ಗೊನೆಯನ್ನು ಕತ್ತರಿಸಿ ಕೊಂಡೊಯ್ದ.

ಬಲಿತವುಗಳಲ್ಲಿ ಕೆಲವಕ್ಕೆ ನಿರುತ್ಸಾಹವಾಗಿತ್ತು, ಕೆಲವಕ್ಕೆ ಮುಂದೇನು ಗತಿಯೋ ಎಂದು ಭೀತಿಯಾಗಿತ್ತು. ಕೆಲವು 'ನಮಗೆ ಎಷ್ಟು ಬೇಗ ಅಂತ್ಯಕಾಲ ಬಂದರೆ ಅಷ್ಟು ಸಂತೋಷ' ಎಂದು ಹಂಬಲಿಸುತ್ತಿದ್ದವು. ಕೆಲವು ಮಾತ್ರ ನಿಶ್ಚಿಂತೆಯಿಂದ ದೇವರ ಮೇಲೆ ಭಾರ ಹಾಕಿ ಪಕ್ವವಾಗುತ್ತಿದ್ದವು.

ಕೆಲವೇ ದಿನಗಳಲ್ಲಿ ಪ್ರತಿಯೊಂದಕ್ಕೂ ಅದರದರ ಅಂತಃಸ್ಥಿತಿಗೆ ಅನುಗುಣವಾದ ಗತಿಯುಂಟಾಯಿತು. ನಿರುತ್ಸಾಹಗೊಂಡ ಕೆಲವು ಹಾಗೇ ಒಣಗಿ ಹೋದವು. ಭಯಗೊಂಡ ಕೆಲವು ಬಣ್ಣ ಮಾಸಿದುವು ಕಡೆಗಾಲಕ್ಕಾಗಿ ಹಾತೊರೆಯುತ್ತಿದ್ದುವು ಅಡುಗೆಯ ಮನೆಯ ದಾದಿ ಹಿಡಿದು, ಹುಳಿ ಪಲ್ಯಗಳಿಗೆ ಹೋಳಾಗಿ ಪರಿಣಮಿಸಿ. ಹತ್ತಾರು ಜನಗಳ ಹೊಟ್ಟೆಗಳೊಳಗೆ ಸೇರಿ ಮರೆಯಾದುವು.

ಹೂ ಆಗಿದ್ದ ಕಾಲದಿಂದಲೂ ನಿಶ್ಚಿಂತೆಯಿಂದ ತಮ್ಮ ಬೆಳವಣಿಗೆಯೊಂದರಲ್ಲಿಯೇ ನಿರತವಾಗಿದ್ದ ಕೆಲವು ಮಾತ್ರ ಹೊಂಬಣ್ಣದ ಹಣ್ಣುಗಳಾಗಿ, ಪ್ರಶಸ್ತವಾದ ಪರಿಕರಗಳೊಡನೆ ಪಂಚಾಮೃತವಾಗಿ, ದೇವರಿಗೆ ನೈವೇದ್ಯವಾದುವು. ಅವುಗಳ ಬದುಕು ಸಾರ್ಥಕವಾಯಿತು.

# ಆದಿಶೇಷನ ಆಯಾಸ

"ತಿಣಿಕಿದನು ಫಣಿರಾಯ...."

"ಯಾಕಂತೆ? ಹೊಟ್ಟೆನೋವೆ?"

"ತಿಣಿಕಿದನು ಫಣಿರಾಯ.... ರಾಮಾಯಣದ ಕವಿಗಳ ಗಡಣದ ಭಾರದಲಿ."

"ವಾಲ್ಮೀಕಿ ಅಷ್ಟು ಬರೆಯಬಾರದಾಗಿತ್ತು ಅಂತ ನಾನು ಹುಟ್ಟಿದಾಗಿಂದ ಹೇಳತಾ ಇದೇನೆ ಆದಿಕವಿ ಆದವನು ತಾನೇ ಹೀಗೆ ದೊಡ್ಡ ಕೆಲಸ ಮಾಡೋಕೆ ಕೂತುಕೊಂಡುಬಿಟ್ಟರೆ, ಆಮೇಲೆ ಬರೆಯೋವರ ಗತಿ ಏನು ಅಂತ ಯೋಚನೆ ಮಾಡಬೇಡವೆ ಆತ?"

"ಆಮೇಲೆ ಬರೆಯೋವರ ಗತಿ ಏನು ಅಂತ ಯಾರಿಗೂ ಯೋಚನೆ ಇಲ್ಲದಿರುವವರಿಂದಲೇ ಫಣಿರಾಯ ಹೀಗೆ ತಿಣಿಕುತಾ ಇರೋದು. ಇದಕ್ಕೆ ಕಾರಣ ವಾಲ್ಮೀಕಿ ಅಲ್ಲ. ಹೇಳತೇನೆ ಕೇಳು."

"ಹೇಳು."

"ವಾಲ್ಮೀಕಿ ಒಂದು ಆಗೇಳು ತೋಟ ಮಾಡಿದ ಒಂದೊಂದು ತೋಟದಲ್ಲೂ ಹತ್ತಾರು ತರಹ ಹಣ್ಣುಗಿಡ, ಹೂಗಿಡ ಬೆಳಸಿದ. 'ಯಾರು ಬೇಕಾದರೂ ಬನ್ನಿ. ನೋಡಿ, ತೆಗೆದುಕೊಳ್ಳಿ, ತಿನ್ನಿ, ಮುಡಿದುಕೊಳ್ಳಿ' ಎಂದು ಅದನ್ನ ದೇಶಕ್ಕೆ ದಾನ ಕೊಟ್ಟು ಹೋದ.

"ಅನೇಕ ಜನ ಬಂದರು. 'ಕೂಜನ್ತಂ ರಾಮ ರಾಮೇತಿ' ಅಂತ ವಾಲ್ಮೀಕಿಯ ಹೆಸರು ಹೇಳಿಕೊಂಡು, ಪ್ರದಕ್ಷಿಣ ನಮಸ್ಕಾರ ಮಾಡಿ, ತೋಟದೊಳಕ್ಕೆ ಹೋದರು. ಅವರವರ ಶ್ರದ್ಧೆಗೆ ತಕ್ಕ ಪ್ರಸಾದ ಅವರವರಿಗೆ ದೊರಕಿತು.

" ಹೀಗೆ ಬಂದವರಲ್ಲಿ ಒಬ್ಬನಿಗೆ, ಮಿಕ್ಕವರಿಗಿಂತ ಮನಸ್ಸು ಪಕ್ವವಾಗಿತ್ತು. ಅವನು ಪ್ರತಿ ತೋಟದಲ್ಲೂ ಮುಖ್ಯಮುಖ್ಯವಾದ ಹೂಗಳನ್ನೂ ಹಣ್ಣುಗಳನ್ನೂ ತಾನು ಕಂಡು, ತಿಂದು, ಸಂತೋಷಪಟ್ಟದ್ದು ಸಾಲದು ಅಂತ, ಇತರರಿಗೂ ತಿನ್ನಿಸಬೇಕು ಎಂದು ಪ್ರಯತ್ನಪಟ್ಟ. ಅವನ ಜೊತೆಯಲ್ಲೇ ವಾಲ್ಮೀಕಿಯ ತೋಟವನ್ನು ತಿರುಗಿ ಬಂದವರು ಕೂಡ ಅವನು ಆರಿಸಿಕೊಂಡು ಬಂದದ್ದನ್ನು ತಾವೂ ನೋಡಿದರು, ತಿಂದರು. ಸಂತೋಷಪಟ್ಟರು.

" ಹೀಗೆ ಬಂದವರಲ್ಲಿ ಒಬ್ಬ ತಾನೂ ತೋಟವನ್ನೆಲ್ಲಾ ತಿರುಗಿಕೊಂಡು ಬಂದ ಮೇಲೆ, ತನಗೆ ಅತ್ಯಂತ ಪ್ರಿಯವಾದ ಒಂದು ಮಾವಿನಮರ ಆರಿಸಿಕೊಂಡು, ಅದರ ಹಣ್ಣನ್ನು ಜನಕ್ಕೆ ತಿನ್ನಿಸಬೇಕು ಎಂದು ಆಸೆಪಟ್ಟ. ಮರದ ಮೇಲೆ ಹತ್ತಿ, ಕೊಂಬೆಕೊಂಬೆಯೆಲ್ಲ ಸೋಧನೆ ಮಾಡಿ, ರಸವತ್ತಾದ ಕಾಯಿ ಕಿತ್ತು ತಂದ. ಉಪ್ಪು ಕಾರ ಕುಟ್ಟಿ ತಂದ, ತಿಂದ, ಲೊಟ್ಟೆ ಹಾಕಿದ. ತಿನ್ನಿಸಿದ, ಲೊಟ್ಟೆ ಹಾಕಿಸಿದ. ರಸವತ್ತಾದ ಹಣ್ಣು ಶೋಧಿಸಿ ಕಿತ್ತು, ಅದಕ್ಕೆ ಗಾಯವಾಗದಂದೆ ಕೆಳಗಿಳಿಸಿ ತಂದ. ಹೋಳು ಹೋಳು ಮಾಡಿ, ಒಂದು ತೊಟ್ಟೂ ವ್ಯರ್ಥವಾಗದಂತೆ, ತಾನೂ ತಿಂದ, ಇತರರಿಗೂ ತಿನ್ನಿಸಿದ.

" ಮತ್ತೂ ಒಬ್ಬನಿಗೆ ಅದೇ ಬುದ್ಧಿ ಹುಟ್ಟಿತು. ಹೊರಟ, ವಾಲ್ಮೀಕಿ ಹಾಕಿದ್ದ ತೋಟಕ್ಕೆ ಬಂದ, ಅದೇ ಮಾವಿನ ಮರದ ಬಳಿಗೆ. ಅವನೇನೂ ಹಿಂದಿನವನ ಹಾಗೆ ಮರ ಹತ್ತಬೇಕಾಗಿರಲಿಲ್ಲ. ಮರದ ತಲೆಯ ಮೇಲೆ ಮೂರು ಅಡಿ ಇದ್ದ ಅವನು. ಕೆಳಗೆ ನಿಂತ ಹಾಗೆಯೇ ಮರಕ್ಕೆ ಮೂರು ಪ್ರದಕ್ಷಿಣ ಹಾಕಿದ. ಕಾಯಿಗಳ ಗೋಜಿಗೆ ಹೋಗಲಿಲ್ಲ. ಹಣ್ಣುಗಳಲ್ಲೆಲ್ಲ ಅತ್ಯುತ್ತಮವಾದದ್ದನ್ನು ಹಿಂದಿನವನ ಕಣ್ಣಿಗೆ ಬೀಳದೆ ತಪ್ಪಿಸಿಕೊಂಡಿದ್ದುದನ್ನು ಕಂಡ. ಮುಟ್ಟಿದರೆ ಎಲ್ಲಿ ಹಣ್ಣಿನ ಮೈ ನಲುಗೀತೋ ಎಂದು ಮೆಲ್ಲಗೆ ಅದನ್ನು ತೊಟ್ಟಿನಿಂದ ಕಳಚಿದ. ಮನೆಗೆ ತಂದು, ಸೀಕರಣೆ ಮಾಡಿ, ತಾನೂ ತಿಂದ, ಎಲ್ಲರಿಗೂ ತಿನ್ನಿಸಿದ. ಅವನ ಹೆಸರು ಎಲ್ಲರ ಬಾಯಲ್ಲೂ ಹಾಡಾಗಿಹೋಯಿತು.

" ಅಂದಿನಿಂದ ಆರಂಭವಾಗಿಹೋಯಿತು, ಕಿಸುಬಾಯಿದಾಸನ ಕೈಂಕರ್ಯ.

" ಒಬ್ಬ ಬಂದ. ಮಾವಿನ ಮರದಡಿ ನಿಂತು ನೋಡಿದ. ಮರ ಹತ್ತೋಣ ಎಂದರೆ, ಕೈಕಾಲುಗಳಲ್ಲಿ ತ್ರಾಣವಿಲ್ಲ. ಕೆಳಗೆ ನಿಂತೇ ಕೀಳೋಣವೆಂದರೆ, ಎತ್ತರ ಸಾಲದು. ಮನಸ್ಸಿನ ಮಂತ್ರಕ್ಕೆ ಮಾವಿನ ಹಣ್ಣು ಉದುರೀತೇ? ಅದರೇನು?

ಮನುಷ್ಯ ಮಾತ್ರನ ಮೇಧಾಶಕ್ತಿಯಲ್ಲವೆ? ಒಂದು ಉದ್ದನೆಯ ಬಿದಿರುಜಲ್ಲಿಯನ್ನು ತಂದು, ಅದಕ್ಕೆ ಎಟುಕಿದ ಹಣ್ಣನ್ನು ಕುಕ್ಕಿ, ಒಂದೆರಡನ್ನು ನೆಲಕ್ಕೆ ಕೆಡವಿದ. ಕೊಂಚ ರಸ ನೆಲಕ್ಕೆ, ಕೊಂಚ ರಸ ಬಿದಿರುಕೋಲಿಗೆ, ಉಳಿದದ್ದು ಹಣ್ಣನ್ನು ಕೆಡವಿದವನಿಗೆ ಆಯಿತು. ಅದು ತಾನು ಕೆಡವಿದ ಹಣ್ಣಿನ ರಸ ಎಂದು ಅವನಿಗೆ ಆ ಅಲ್ಪದರಲ್ಲಿಯೇ ತೃಪ್ತಿ. ಅವನಿಂದ, ಆ ರಸದ ಅಂಶವನ್ನು ಪಡೆದವರಿಗೆ, ಅದಕ್ಕೆ ಮೀರಿದ್ದನ್ನು ತಾವು ಕಂಡೇ ಇಲ್ಲವೆಂಬ ಅಜ್ಞಾನದ ಸಮಾಧಾನ.

"ಈ ಬಿದಿರುಜಲ್ಲಿಯವನಾದ ಮೇಲೆ ಇನ್ನೊಬ್ಬ ಬಂದ. ಅವನೂ ಅದೇ ಮರಕ್ಕೆ ಬಂದ. ಪಾಪ, ಇನ್ನೂ ಬೇರೆ ಮರವಿದೆ ಎಂಬುದನ್ನು ಅವನು ಅರಿಯ ಬಂದ. ಮರ ಹತ್ತಲು ಬಾರದು, ಎತ್ತರ ನೊದಲೇ ಸಾಲದು. ಬಿದಿರನ್ನು ಹಿಡಿಯಲು ತೋರದು. ಕಣ್ಣಿಗೆ ಬಿದ್ದ ಕಲ್ಲು ಕೈಗೆತ್ತಿಕೊಂಡು, ದೇವರ ಮೇಲೆ ಭಾರ ಹಾಕಿ, ಮರಕ್ಕೆ ಬೀರಿದ. ಮೊದಮೊದಲನೆಯ ಏಟುಗಳೆಲ್ಲ ಮರದ ದಿಕ್ಕಿಗೆ ಮುಖ ತೋರಿಸದೆ ಓಡಿದುವು. ಸ್ವಲ್ಪ ಅಭ್ಯಾಸವಾದ ಮೇಲೆ ಒಂದು ಕಲ್ಲು ಅವನ ಮೇಲಿನ ಕನಿಕರದಿಂದ ಒಂದು ಕೊಂಬೆಯ ಕಡೆಗೆ ಹೋಯಿತು. ಅದರ ವೇಗದಿಂದ ಬೀಸಿದ ಗಾಳಿ, ತೊಟ್ಟು ಸಡಿಲವಾಗಿ ಕೆಳಗೆ ಬೀಳಲು ಸಿದ್ಧವಾಗಿದ್ದ ಒಂದು ಮುದಿ ಹಣ್ಣನ್ನು ನೂಕಿತು. ಮುಕ್ಕಾಲು ರಸ ಮಣ್ಣಿಗಾಯಿತು. ಹಣ್ಣಿನ ಮೈತುಂಬ ಕಲ್ಲು, ಮಣ್ಣು ಮೆತ್ತಿಕೊಂಡಿತು. ಪಾಪ, ಕಷ್ಟಪಟ್ಟವನು! ಮುಖದಿಂದ ಬೆವರು ಒರಸಿಕೊಂಡ, ಹಣ್ಣಿನಿಂದ ಮಣ್ಣು ಒರಸಿಕೊಂಡ. ಪಡೆದದ್ದೇ ಪರಮಾನ್ನ ಎಂದ. ತಿಂದ, ತಿನ್ನಿಸಿದ. ಅರಿಯದ ಜನರ ಆನಂದವನ್ನಂತೂ ಹೇಳತೀರದು!

"ಅನಂತರ ಬಂದನಪ್ಪಾ ಕೊನೆಗೊಬ್ಬ! 'ನಾನು ಮಿಕ್ಕವರಂತಲ್ಲ! ನಾನು ನಿಃಸ್ವಾರ್ಥಿ! ನಾನು ತಿನ್ನುತ್ತೇನೋ ಇಲ್ಲವೋ ಅದು ಕಟ್ಟಿಕೊಂಡೇನು? ಇತರರಿಗೆ ತಿನ್ನಿಸುವುದು ಮುಖ್ಯ!" ಎಂದುಕೊಂಡು, ಅಪ್ಪ ಹಾಕಿದ ಆಲದ ಮರ – ಅಲ್ಲ, ಮುತ್ತಜ್ಜ ನೋಡಿದ್ದ ಮಾವಿನ ಮರದ ಹತ್ತಿರ ಬಂದ. ಮರ ಏರುವುದೇ ಮೊದಲಾದ ಹಿಂದಿನ ಹಳೆಯ ಹಾದಿಗಳು ಅವನಿಗೆ ತೀರ ಹಳೆಯದು ಎನ್ನಿಸಿತು. ಒಂದು ಹೊಸ ದಾರಿ ಸೃಷ್ಟಿಸಬೇಕು ಎನ್ನಿಸಿತು. ನೋಡಿದ. 'ಹೊಸದೇನು? ಹಳದೇನು?' ಎಂದು ಹಾಹಾಕಾರ ಮಾಡುತ್ತ ಕಣ್ಣು ಬಿಟ್ಟ.

ಆಗ ಕಣ್ಣಿಗೆ ಕಾಣಿಸಿತು—ಹಿಂದಿನವರ ಏಟುಗಳನ್ನು ತಾಳಲಾರದೆ ಹಣ್ಣು ಕಾರಿಕೊಂಡ ರಸದಲ್ಲಿ ಸ್ನಾನಮಾಡಿ, ಹೆಪ್ಪುಗಟ್ಟಿದ್ದ ರಸವತ್ತಾದ ಮಣ್ಣು! 'ಯಾರಿಗುಂಟು? ಯಾರಿಗಿಲ್ಲ? ಅನಾಯಾಸವಾಗಿ ಕೈಗೆ ಎಟುಕುವ ಹಾಗೆ ಕಾಲಗೆಳಗೆ ಬಿದ್ದಿರುವ ಈ ರಸಪೂರಿ ಮಣ್ಣನ್ನು ಬಿಟ್ಟು, ಏರಲಾರದ ಮರದ ಮೇಲೆ, ಎಟುಕಲಾರದ ಎತ್ತರದಲ್ಲಿ ಇರುವ ಹಣ್ಣನ್ನು ಪಡೆಯಬೇಕೆಂದು ಪೆಂಗನಂತೆ ಆಯಾಸಪಡಲೇಕೆ?' ಎಂದುಕೊಂಡ. ಹೀಗೆ ಹೊಳೆಯಿತೋ ಇಲ್ಲವೋ, ಕಣ್ಣು ಮುಚ್ಚಿ, ಕಣ್ಣು ತೆರೆಯುವುದರೊಳಗೆ ಆ ಮಣ್ಣನ್ನು ಮುಕ್ಕಿದ ಚಪ್ಪರಿಸಿದ. ಇತರರ ಬಾಯಿಗೂ ಹಾಕಿದ.

"ಏನನ್ನ? ಮಣ್ಣನ್ನೆ?"

"ಮತ್ತೇನನ್ನ!"

"ಓ, ಈಗ ಅರ್ಥವಾಯಿತು—ತಿಣಿಕಿದನು ಫಣಿರಾಯ—ಏಕೆ ಅಂತ! ಅಷ್ಟು ಮಣ್ಣು ತಿಂದರೆ ತಿಣುಕದೆ ಮತ್ತೇನು!"

# ಹಳೇ ಹೊಳೆ

ಅದೊಂದು ಬಹಳ ಹಳೆಯ ಹೊಳೆ. ಮಳೆಗಾಲದಲ್ಲಿ ಸ್ವಲ್ಪ ಏರು, ಬೇಸಿಗೆಯಲ್ಲಿ ಸ್ವಲ್ಪ ಪೇರು ಆದರೂ ಸದಾ ಕಾಲವೂ ಅದರ ತುಂಬ ಸಮೃದ್ಧಿಯಾಗಿ ನೀರು.

ಏಕೋ ಏನೋ—ಒಂದು ಸಲ ದಡಕ್ಕೆ ಆ ಹೊಳೆಯ ಮೇಲೆ ಅಸಮಾಧಾನ ಬಂತು. ಹೊಳೆಯ ಗತಿಗೆ ಅನನುಕೂಲವಾಗಲಿ ಎಂದು ಕುಸಿದು ಅಡ್ಡಬಿತ್ತು. ಎರಡು ಕ್ಷಣ ಹೊಳೆ ಹರಿಯುವುದಕ್ಕೆ ಸ್ವಲ್ಪ ಅಡ್ಡಿಯಾಯಿತು. ಅದೇ ಎರಡು ಕ್ಷಣ ಆದಮೇಲೆ, ಬಿದ್ದ ದಡದ ಮಣ್ಣು ಕರಗಿ ಹೋದಮೇಲೆ, ಹೊಳೆ ಮೊದಲಿನ ಹಾಗೇ ಹರಿಯಿತು.

ಮಣ್ಣಿನೊಡನೆ ಸಂಬಂಧವಿಟ್ಟುಕೊಂಡಿದ್ದ ಕೆಲವು ಸಣ್ಣ ದೊಡ್ಡ ಕಲ್ಲುಗಳು ಕೂಡ, ತಾವೂ ಹೊಳೆಯನ್ನು ತಿದ್ದಬೇಕೆಂದು, ತಮಗೆ ಬೇಕಾದ ಹಾಗೆ ತಿರುಗಿಸಿಕೊಳ್ಳಬೇಕೆಂದು ಹತ್ತಿರ ಬಂದವು. ಬಂದದ್ದೇ ತಡ, ಅದುವರೆಗೆ ಬಿಸಿಲು ಗಾಳಿಗಳನ್ನು ಕಂಡು ಸವಿದು, ತಮ್ಮ ಪಾಡಿಗೆ ತಾವು ಬದುಕಿಕೊಳ್ಳುತ್ತಿದ್ದ ಆ ಕಲ್ಲುಗಳು ಹೊಳೆಯೊಳಗೆ ಮುಳುಗಿಹೋದುವು. ನೀರಿನ ಸೆಳೆತಕ್ಕೆ ಸಿಕ್ಕಿ ಹತ್ತು ಹೆಜ್ಜೆ ಮುಂದೆ ಹೋದವು. ಇನ್ನೂ ಮುಂದೆ ಹೋಗುವುದಕ್ಕಾಗಲಿ, ಮೇಲೆದ್ದು ಬರುವುದಕ್ಕಾಗಲಿ ಸ್ವಂತ ಶಕ್ತಿಯಿಲ್ಲದೆ ಅಲ್ಲೇ ಬಿದ್ದುಕೊಂಡವು. ಅವುಗಳ ಮೈಮೇಲೆಲ್ಲ ಪಾಚಿ ಬೆಳೆದುಕೊಂಡಿತು. ಹತ್ತಿರ ಕಿವಿಕೊಟ್ಟು ಕೇಳಿದ್ದರೆ, "ನಾಮಾಪಿ ನ ಶ್ರೂಯತೇ! ನಾಮಾಪಿ ನ ಶ್ರೂಯತೇ!" ಎಂದು ಅವುಗಳ ಗೋಳುಪದ ಅಶಕ್ತವಾಗಿ ಕೇಳಿಬರುತ್ತಿತ್ತು.

ಆ ಸಣ್ಣ ಪುಟ್ಟ ಕಲ್ಲುಗಳ ಪರಾಕ್ರಮದಿಂದ ಅದೇನು ಸ್ಫೂರ್ತಿ ಬಂದಿತೋ—ದಡದಲ್ಲಿ ಅದುವರೆಗೆ ಸ್ಥಿರವಾಗಿದ್ದ ಒಂದು ಕಲ್ಲುಬಂಡೆ ತಾನೂ

ಹೊಳೆಯ ಮೇಲೆ ದಾಳಿ ನಡಸಿತು. ಹೊಳೆ ಅದರ ದಾಳಿಯನ್ನು ಪ್ರತಿಭಟಿಸ ಲಿಲ್ಲ. ಬಂಡೆಯನ್ನು ತಾಕಿದಾಗ, ಹೊಳೆ ಎರಡು ಭಾಗವಾಗಿ, ಬಂಡೆಯನ್ನು ಎರಡೂ ಕಡೆಯಿಂದ ತಬ್ಬಿಕೊಂಡು, ಬಂಡೆಯನ್ನು ಬಿಟ್ಟಾಗ ಪುನಃ ಮೊದಲಿ ನಂತೆಯೆ ಒಂದಾಗಿ ಮುಂದೆ ಹೋಯಿತು.

ತಾನು ಬೀಜವಾಗಿದ್ದ ಕಾಲದಿಂದಲೂ ಬಂಡೆಯ ಪಕ್ಕದಲ್ಲೇ ಇದ್ದು, ಮೊಳೆತು, ಬೆಳೆದು, ಬಲಿತು, ಮುದಿಯಾಗಿದ್ದ ಒಂದು ಮಹಾವೃಕ್ಷ—ತನಗೆ ಹೊಂದಿಕೊಂಡಿದ್ದ ಬಂಡೆಯ ವಿರಹವನ್ನು ಸಹಿಸಲಾರದೆ, ಅದರ ಮಹಾಕಾರ್ಯ ದಲ್ಲಿ ತಾನೂ ಸಹಗಮನ ಮಾಡಿಕೊಳ್ಳಬೇಕೆಂದು ನಿಶ್ಚಯಿಸಿ, ನಿಂತಲ್ಲಿಯೇ ದುಃಖದಿಂದ ಕುಗ್ಗಿ ಕುಸಿದು, ಧಡೀರನೆ ಅಡ್ಡಲಾಗಿ ಬಿತ್ತು ಹೊಳೆ ಒಂದು ಕ್ಷಣ ಬೆಚ್ಚಿತು. ಮರುಕ್ಷಣವಲ್ಲಿಯೇ ತನ್ನ ಸ್ಥೈರ್ಯವನ್ನು ಸವರಿಸಿಕೊಂಡು, ಬಿದ್ದ ಮರದ ಅಡಿಯಲ್ಲಿ ಅರ್ಧ ತೂರಿ. ಮರದ ಮೇಲೆ ಅರ್ಧ ಹಾರಿ, ಮುಂದೆ ಸ್ವಲ್ಪ ದೂರ ಜಾರಿ, ಮೊದಲಿನಂತೆಯೇ ಹರಿಯಿತು.

ಹೀಗೆ ಅನೇಕ ಕಾಲ ಕಳೆಯಿತು. ದಡ ಎಷ್ಟೋ ಸಲ ಕುಸಿಯಿತು. ಕಲ್ಲು ಮಣ್ಣು ಎಷ್ಟೋ ಬಿತ್ತು. ಬಂಡೆಗಳೂ ಮರಗಳೂ ಎಷ್ಟೋ ಉರುಳಿ ಬಂದವು ಎರಡು ಕ್ಷಣ ಗತಿಭಂಗವಾದರೂ ಹೊಳೆ ಬಹು ಬೇಗನೆ ಚೈತನ್ಯ ಗೊಳ್ಳುತ್ತಿತ್ತು.

× × × ×

ವಿಶ್ವಶಿಲ್ಪಿಯೊಬ್ಬ ಬಂದ. ಊರ ಬಳಿಯ ಹೊಳೆಯನ್ನು ನೋಡಿದ. ಇತರ ಊರುಗಳ ಬಳಿ ಹೊಳೆಗಳಿಲ್ಲದೆ, ಬೆಳೆಗಳಿಲ್ಲದೆ. ದನ ಕರು ಜನ ಮರ ಒಣಗುವುದನ್ನು ಆತ ಕಂಡಿದ್ದ. ಒಂದು ಜಲದಿಂದ ಹತ್ತು ನೆಲ ಬೆಳಸಬಹು ದೆಂದು ಅವನಿಗೆ ಸ್ಫೂರ್ತಿ ಬಂತು. ಹೊಳೆಯಲ್ಲಿ ನೀರಿನ ರಭಸ ಕಡಮೆ ಯಾಗಿದ್ದ ಕಾಲ ನೋಡಿಕೊಂಡು, ಹೊಳೆಯಲ್ಲಿ ಪ್ರವಾಹ ಬಂದಾಗ ಅದರ ನಡತೆ ನೋಡಿಕೊಂಡು, ಹೊಳೆಯ ಗುಣಗಳಿಗೆ ಹೊಂದಿಕೊಂಡು, ಅದರ ಸ್ವಭಾವವನ್ನು ಅನುಸರಿಸಿ, ಇಷ್ಟಿಷ್ಟು ಆತುರವಿಲ್ಲದೆ, ನಿಧಾನವಾಗಿ ಹೊಳೆಗೇ ಗೊತ್ತಾಗದ ಹಾಗೆ, ಅದರ ದಾರಿಯಲ್ಲಿ ಒಂದು ದೃಢವಾದ ಕಟ್ಟೆ ಹಾಕಿದ.

ಹೊಳೆ ತನ್ನ ಮುಂದೆ ಮಾತ್ರ ನೋಡುತ್ತ " ಬೇಸಗೆಯಲ್ಲಿ ಇದ್ದ ಹಾಗೇ

ಇದ್ದೇನೆ" ಎಂದುಕೊಂಡಿತು. "ಏಕೆ ಹೀಗಿದ್ದೇನೆ?" ಎಂಬುದನ್ನು ಕುರಿತು ಯೋಚಿಸಬೇಕೆಂಬುದು ಕೂಡ ಅದರ ಮನಸ್ಸಿಗೆ ಹೊಳೆಯಲಿಲ್ಲ.

ವಿಶ್ವಶಿಲ್ಪಿ ತನ್ನ ಕೃತಿಯನ್ನು ಮುಗಿಸಿದಾಗ, ಲೋಕ ಅದನ್ನು ಕಂಡು, ಮೆಚ್ಚಿ, ಮುಗಿಲನ್ನು ಮುರಿಯುವಂತೆ ಕೂಗಿದ ಮಹಾ ಜಯಘೋಷವನ್ನು ಕೇಳಿ, ಒಂದು ದಿನ ಹೊಳೆ ಕೌತುಕದಿಂದ ಹಿಂದಿರುಗಿ ನೋಡಿತು. ನೋಡಿ, ಆಶ್ಚರ್ಯದಿಂದ ಮೂಕವಾಯಿತು. ಕಟ್ಟೆಯ ಮುಂದುಗಡೆ ಬೇಸಗೆಯ ತೊರೆಯಂತೆ ಕೃಶವಾಗಿ ಕಂಡುಬರುತ್ತಿದ್ದ ತಾನು ಕಟ್ಟೆಯ ಹಿಂದುಗಡೆ ಸಾಗರವಾಗಿ ಬೆಳೆದು ನಿಂತಿದ್ದುದನ್ನು ಕಂಡು, ತನ್ನ ವಿಶಾಲತೆಗೆ ಕಾರಣನಾದ ವಿಶ್ವಶಿಲ್ಪಿಗೆ ಆ ಹೊಳೆ ಮೌನದಿಂದ ಗಂಭೀರವಾಗಿ ವಂದನೆ ಸಲ್ಲಿಸಿತು.

# ಹುಲಿಯ ಸೋಲು

ಆ ಹುಲಿ ಇನ್ನೂ ಶುದ್ಧ ಹುಡುಗು. ಎಳೇ ನಿಂಬೇಕಾಯಿ. ಲೋಕದ ಅನುಭವ ಸಾಲದು. ಬಹಳ ದುಡುಕು. ತಿಳಿದವರು ಹೇಳಿದ ಮಾತು ಎಂದರೆ ತಾತ್ಸಾರ.

ಆ ಹುಡುಗು ಹುಲಿಗೆ ಒಂದು ಸಲ ಒಂದು ಹಂದಿಯ ಮೇಲೆ ಅಸಾಧ್ಯ ವಾದ ಆಗ್ರಹ ಉಂಟಾಯಿತು. ಕೆಸರಿಗೆ ಕಲ್ಲೊಗೆದರೆ ಏನಾಗುತ್ತದೆ ಎಂಬ ಪರಿಜ್ಞಾನ ಇನ್ನೂ ಬಂದಿರಲಿಲ್ಲ, ಆ ಹುಲಿಗೆ.

ಇಂಥ ಬುದ್ಧಿಯಿಲ್ಲದ ಮೊದ್ದು ಹುಲಿಗೆ ಹಂದಿಯ ಮೇಲೆ ಏಕ ಅಂತಹ ಆಗ್ರಹ?

ಆ ಹಂದಿ ಕಾಡುಹಂದಿ ಕೂಡ ಅಲ್ಲ. ಅದು ಊರು ಹಂದಿ. ಅದರ ಮೇಲೆ ಏಕೆ ಹೀಗೆ, ಹರಿದು ಹೊಸಗಿಬಿಡುವಷ್ಟು ಕೋಪ, ಈ ಕಾಡುಹುಲಿಗೆ?

ಆ ಹಂದಿ ಎರಡು ವರ್ಷಗಳ ಹಿಂದೆ ಊರಿನಿಂದ ಕಾಡಿಗೆ ಬಂದಿತಂತೆ. ಕಾಡಿನ ಪ್ರಾಣಿಗಳು ' ಹೋಗಲಿ, ಇದ್ದುಕೊಳ್ಳಲಿ ' ಅಂತ ಸಹಿಸಿಕೊಂಡವಂತೆ. ಎರಡು ವರ್ಷ ಕಳೆದರು ಕೂಡ, ಕಾಡಿಗೆ ಬಂದಗೂ ತನ್ನ ಊರು ನಡತೆಯನ್ನು ಬಿಡಲಿಲ್ಲ ಆ ಹಂದಿ; ಊರನ್ನು ಬಿಟ್ಟುಬಂದರೂ ಕಾಡಿನ ನಡತೆಯನ್ನು ಕಲಿಯಲಿಲ್ಲ ಆ ಹಂದಿ. ಹಾಗಾಗಿ, ಕಾಡಿಗೆ ಬಂದರೂ ಊರು ಹಂದಿ ಊರು ಹಂದಿಯಾಗಿಯೇ ಉಳಿಯಿತು. ಕಾಡು ಹಂದಿಯಾಗಿ ಬೆಳೆಯಲಿಲ್ಲ. ಕಾಡಿನ ಪ್ರಾಣಿಗಳೊಡನೆ ಬೆರೆಯಲಿಲ್ಲ. ಆದರಿಂದಾಗಿ, ಕಾಡಿನ ಪ್ರಾಣಿಗಳು ಅದನ್ನು ತಮ್ಮ ಜೊತೆಗೆ ಕರೆಯಲಿಲ್ಲ. ಆದರಿಂದಾಗಿ, ಊರು ಹಂದಿಯ ಹೊಟ್ಟೆಯಲ್ಲಿ ಕಾಡುಗಿಚ್ಚು ಹತ್ತಿಕೊಂಡಿತು.

"ಹುಲಿಗಳು ಹಲ್ಲೇ ಉಜ್ಜುವುದಿಲ್ಲ....ಸಿಂಹಗಳ ಮೂಲ ಪುರುಷರು ಸಿವಂಗಿಗಳಾಗಿದ್ದರು....ಸಲಗಗಳ ಸೊಂಡಿಲುಗಳೆಲ್ಲ ಸತ್ವವಿಲ್ಲದೆ ಸುಕ್ಕುಸುಕ್ಕಾಗಿ ಸುರುಳಿಬಿದ್ದುಹೋಗಿವೆ....ಮುದಿಸರ್ಪಗಳು ಸಂತಾನಾಭಿವೃದ್ಧಿಗಾಗಿ ಸಿದ್ಧಮಕರಧ್ವಜವನ್ನು ಸೇವಿಸುತ್ತಿವೆ....ಕಾಡುಕೋಣಗಳಿಗೆ ಕೊಂಬೇ ಇಲ್ಲ...." ಇತ್ಯಾದಿಯಾಗಿ ಸುಮ್ಮನೆ ಬಾಯಿಗೆ ಬಂದದ್ದನ್ನು ಒದರಿಕೊಳ್ಳುತ್ತ ಹಂದಿ ತನ್ನ ಹೊಟ್ಟೆಯುರಿಯನ್ನು ಹೆಚ್ಚಿಸಿಕೊಳ್ಳುತ್ತಿತ್ತು.

"ಹುಲಿಗಳೂ ಸಿಂಹಗಳೂ ತಮ್ಮ ಆಹಾರವನ್ನು ತಾವೇ ಏಕೆ ಬೇಟೆಯಾಡಿ ಕೊಲ್ಲಬೇಕು? ನನ್ನ ಹಾಗೆ ದಾರಿಯಲ್ಲಿ ಬಿದ್ದಿದ್ದನ್ನೇ ಏಕೆ ತಿನ್ನಬಾರದು? ದಾರಿದ್ರ್ಯದೇವತೆಗೆ ತವರುಮನೆಯಾದ ತಮ್ಮ ಭಾರತಾರಣ್ಯದಲ್ಲಿ 'ಇದೇ ಬೇಕು, ಅದೇ ಬೇಕು' ಎಂಬ ರುಚಿ ಬೆಳೆಸಿದರೆ, ನಮ್ಮ ಮೂವತ್ತು ಮೂರು ಕೋಟಿ ಬಡಪ್ರಾಣಿಗಳ ಗತಿಯೇನು? ನಮ್ಮ ದಲಿತರ ಗತಿಯೇನು?....ಆನೆಗಳೂ ಕಾಡುಕೋಣಗಳೂ ಹಸಿರು ಸೊಪ್ಪನ್ನೇ ಏಕೆ ಆರಿಸಿ ಮೇಯಬೇಕು? ಹೀಗೆ ಮಾಡಿದರೆ, ನಮ್ಮ ಸಹೋದರರಾದ ಮರಗಿಡಗಳು ಬದುಕುವುದು ಹೇಗೆ? ನಮ್ಮ ಬಂಧುಬಾಂಧವರ ರಕ್ತವನ್ನು ಹೀರಿ ಬೊಜ್ಜು ಬೆಳೆಸುವ ಬದಲು, ನನ್ನ ಹಾಗೆ ಕೊಳತದ್ದನ್ನೇ ತಿಂದು ತಿಪ್ಪೆಯಲ್ಲಿ ತಪಸ್ಸು ಮಾಡಬಾರದೆ?....ನನ್ನ ಆದರ್ಶವನ್ನು ಇವರು ಅನುಸರಿಸುವುದು ಯಾವಾಗ? ಸಿಂಹ ಹೆತ್ತರೆ—ಒಂದು ಮರಿ! ಗಜಪ್ರಸವಕ್ಕೆ—ಹತ್ತು ವರ್ಷ! ಹಂದಿಗೆ ವರ್ಷಕ್ಕೆ ನೂರು ಮರಿ! ನನ್ನನ್ನು ನೋಡಿ ಇವರು ಕಲಿಯಬಾರದೆ?" ಎಂದು ಒಂದೇ ಸಮನೆ ಕೊರಲು ಕುಯಿದ ಹಾಗೆ ಕಿರೋ ಎಂದು ಕಿರಿಚಿಕೊಳ್ಳುತ್ತಿತ್ತು.

ಆ ಕಿರಿಚನ್ನು ಕೇಳಿ ತಡೆಯಲಾರದೆಯೋ ನಮ್ಮ ಹುಡುಗು ಹುಲಿ ಕೆರಳಿ ಮೀಶೆ ತಿರಿಚಿದ್ದು. "ಹಳ್ಳ ತೆಗೆದು ಈ ಹಂದಿಯನ್ನು ಹೂತುಬಿಡುತ್ತೇನೆ!" ಎಂದು ಹನುಮಂತನ ಹೆಜ್ಜೆ ಹಾಕಿ ಹೊರಟದ್ದು.

ಹುಲಿಯ ಆರ್ಭಟಕ್ಕೆ ಹಂದಿಯೇನೂ ಹೆದರಲಿಲ್ಲ. "ಇದಕ್ಕೆಲ್ಲ ಇಟ್ಟಿದ್ದೇನೆ ಮಂತ್ರ!" ಎಂದುಕೊಂಡು, ಕಾಡಿನ ಪ್ರಾಣಿಗಳೆಲ್ಲ ತಮ್ಮ ದೇಹಬಾಧೆ ತೀರಿಸಲು ಬಳಸುತ್ತಿದ್ದ ಬಹಿರ್ಭೂಮಿಗೆ ಹೋಗಿ, ಹತ್ತು ಸಲ ಹೊರಳಾಡಿ, ಹುಲಿಯ ಎದುರಿಗೆ ಬಂತು.

ಹಂದಿಯ ಅದೃಷ್ಟವೋ, ಹುಲಿಯ ದುರದೃಷ್ಟವೋ—ಗಾಳಿ ಹುಲಿಗೆ ಎದುರಾಗಿ ಬೀಸುತ್ತಿತ್ತು. ಹಂದಿಯ ಮೈಮೇಲೆ ಬೀಸಿ ಬಂದ ಗಾಳಿಗೆ ಹುಲಿ ಬೆಚ್ಚಿ, ಬಾಲದಿಂದ ಮೂಗು ಮುಚ್ಚಿಕೊಂಡು ನಿಂತಿತು. ಹಂದಿ ಒಂದೊಂದು ಹೆಜ್ಜೆ ಮುಂದೆ ಹಾಕಿದ ಹಾಗೆಲ್ಲ ಹುಲಿ ಒಂದೊಂದು ಹೆಜ್ಜೆ ಹಿಂದೆ ಹಾಕಿತು.

"ಹಳ್ಳ ತೆಗೆದು ನನ್ನ ಹೂಳ್ತೀಯಾ?" ಎಂದಿತು ಹಂದಿ.

"ಜಗಳಕ್ಕೆ ಬರ್ತೀಯಾ ನನ್ನ ಮೇಲೆ?" ಎಂದಿತು, ಹಂದಿ.

"ನನ್ನ ಸುದ್ದಿ ಎತ್ತೀಯಾ ಇನ್ಮೇಲೆ?" ಎಂದಿತು, ಹಂದಿ.

ಒಂದೊಂದು ಸವಾಲಿಗೂ ಎರಡೆರಡು ಹೆಜ್ಜೆ ಮುಂದುಮುಂದಕ್ಕೆ ಹಾರತಾ ಬಂತು.

ಆದರ ನಾತ ತಡೆಯಲಾರದೆ, ಬಾಯಿ ಬಿಡಲಾರದೆ, ಪಾಪ, ಹುಲಿ ಉಸಿರೆತ್ತದೆ, ಬಂದ ದಾರಿ ಹಿಡಿದು ಓಡಿದ್ದೇ ಓಟ!

ಆ ಹೊತ್ತಿನಿಂದ ಈಚೆಗೆ, "ಹಂದಿ" ಎಂಬ ಹೆಸರು ಎತ್ತಿದರೆ ಸಾಕು.... ಹುಲಿಗಳೆಲ್ಲ ಹತ್ತು ಮೈಲಿ ಆಚೆಗೆ!

ಹೀಗೆ, ಹಿಂದೆ ಒಂದು ಸಲ, ಒಂದು ಹಂದಿ ಒಂದು ಹುಲಿಯನ್ನು ಸೋಲಿಸಿಯೇಬಿಟ್ಟಿತು!!

# ಕವಿಕರ್ಮ

– ೧ –

ಪೂರ್ವಕರ್ಮವು ನಮ್ಮದು—
ಸೊಗಸು ಕವಿಗಳನಿಕ್ಕಿ ಮೆಚ್ಚಿದ
ನವ್ಯಕವಿಗಳ Power ಅದು!
ಅಪರ ಕರ್ಮವು ನಿಮ್ಮದು—
ಯಾರು ಏನೇ ಬರೆದರೂ – ಅದ
ಓದಬೇಕಾದವರದು!

– ೨ –

ನಾನೊಂದು ಕವಿ – ಹೊಸಬ – ನವ್ಯ!
( ಎಂದರೇನೇ? ಅಚ್ಚಗನ್ನಡದ – ಎಡಚ! )
ಇದು ನನ್ನ New ಕವಿತೆ – ನವ್ಯ!
( ನಿಮಗೆ ತಿಳಿಯುವ ಹಾಗೆ ಹೇಳಿದರೆ – ಪಡಚ! )
ದಾನವರಿಗಿದು ಹವ್ಯ!
ದೇವತೆಗಳಿಗೆ ಕ್ರವ್ಯ!
ನರಮನುಷ್ಯರಿಗನಕ – ಓ! ದಿವ್ಯ
ಗೋಮಾತೆಯುದರದಿಂದಿಳಿತರುವ – ವ್ಹಾ! ವ್ಹಾ!
ಗೊಂಡೆಬಾಲದ ಬಳಿಯ ಗವ್ಯ!

– ೩ –

ಕವಿಯೆ ಸುತ್ತಿಗೆ, ಕಾವ್ಯ ಅಡಿಗಲ್ !
ಇವನ, ಅಗರಾ ನಡುಗಡೆ—
ಇಂದು ಈ ಕವಿ, ನಾಳೆ ಆ ಕವಿ—
ಸಿಕ್ಕಿದವರಿಗೆ ಸುಡುಗಡೆ!
ಸುಡುವ ಕಡೆಯೋ ಷುಡುವ ಕಾಡು ?
ಬೇಡ, ವಾಚಕ ಪಡುವ ಪಾಡು!

– ೪ –

**ಕವಿ:** ಕಂಡವರ ಕಾಲ ಬಳಿ ನಾ ಕಲಿಯಲಿಲ್ಲ;
ಗುರು – ಸ್ವಯಂಬುದ್ಧಿ !
**ವಾಚಕ.** ಓ! ಅದಕೆ ಹೀಗೆಲ್ಲ?

# ಪರಗತಿ ಪಕ್ಷಿ

– ೧ –

ಕಾಗೆ ತಾ ಕೈಮುಗಿದು ಬೇಡಿತು
ಪಕ್ಷಿರಾಜನ ಗರುಡನ ;
" ದೊರೆಯೆ ! ನಾನಿನ್ನಾರೆನೋ ! ಜೊತೆ
ಸಾಕು – ನನಗೀ ಕುರುಡನ !

" ಕಾಗೆ ಗೂಗೆಗಳೆಂಬರೆಲ್ಲಗು
ಅವಳಿಜವಳಿಯ ಕರೆವವೋಲ್ !
ಕೋಗಿಲೆಗೆ ನಾವ್ ಕಾವು ಕೂತೆವು
ಎಂಬುದನು ತಾವ್ ಮರೆತವೋಲ್ !

" ಕೋಗಿಲೆಯು ತಾವ್ ಮೆಚ್ಚಿಹಿರಿ, ಕಲ
ಕಂಠನೆಂದವ ಕರೆವಿರಿ !
ಆ ಮಕ್ಕಳಿಗೆ ನಾವಕ್ಕರವ ಕಲಿ –
ಸಿಟ್ಟೆವೆಂಬುದ ಮರೆವಿರಿ !

" ಕ್ಷಮಿಸಿ, ಆಕ್ಷೇಪಿಸುವ ಮಾತಿದು
ಎನುತ ಭಾವಿಸಬಾರದು,
ನಮಗು 'ಕೋಗಿಲೆ' ಹೆಸರನಿತ್ತೊಡೆ
ಬೇಡನೆನುವವರಾರದು ?"

– ೨ –

ಕಾಗೆಯ ಮೊರೆಯನು ಕೇಳಿತು ಗರುಡ ,
ನಕ್ಕಿತು ಗರಿಗಳ ಮರೆಯಲ್ಲಿ.
ಹೇಳಿತು : “ ನಿನಗಿದೊ ‘ ಕೋಗಿಲೆ ’ ಹೆಸರು !”
ಬರೆಸಿತು ಹಾವಿನ ಪರೆಯಲ್ಲಿ :

“ ಹಕ್ಕಿಗಳೆಲ್ಲಕು ಇದೊ ತಿಳಿವಳಿಕೆ :
ಇಂದಿನ ದಿನವೇ ಮೊದಲಾಗಿ
ಕಾಗೆಗಳೆಲ್ಲವನೆಲ್ಲರು ‘ ಕೋಗಿಲೆ ’
ಎನಬೇಕೀ ಶಾಸನಕಾಗಿ !”

ಪಕ್ಷಿಪ್ರಜೆಗಳಾ ರಾಜಶಾಸನವ
ಮನ್ನಿಸಿ ಶಿರಸಾ ವಹಿಸಿದುವು.
ಹೆಸರಿಗೆ ಕಾಗೆಯ ‘ ಕೋಗಿಲೆ ’ ಎಂದುವು ;
ಒಳಗೊಳಗೆಯೆ ಗಹಗಹಿಸಿದುವು.

– ೩ –

“ ಕೋಗಿ–ಲೇ ! ಕೋಗಿ–ಲೇ !”
ಎಂಥ ಹೆಸರು ಹಕ್ಕಿಗೆ!
ಎಲ್ಲಿ ನೋಡಲೆಲ್ಲಿ ಕೇಳ –
ಲಾರು ಬಾಯಿ ತೆರೆದರೂ :
“ ಕೋಗಿ–ಲೇ ! ಕೋಗಿ–ಲೇ !“
ಎಂಥ ಹೆಸರು ಹಕ್ಕಿಗೆ !

ಎಲ್ಲಿ ರೆಕ್ಕೆ ಬಡಿದರಲ್ಲಿ –
ಎಲ್ಲಿ ಕೊಕ್ಕು ಕುಕ್ಕಿದಲ್ಲಿ –
“ ಕೋಗಿ–ಲೇ ! ಕೋಗಿ–ಲೇ !”

ಮರದ ಮೇಲೆ – " ಕೋಗಿ–ಲೇ!"
ನೆಲದ ಮೇಲೆ – " ಕೋಗಿ–ಲೇ!"
ಆಗಸದಲಿ – " ಕೋಗಿ–ಲೇ!"
ಈ ಕಸದಲಿ – " ಕೋಗಿ–ಲೇ!"
ಕೊಕ್ಕಿನಲ್ಲಿ – " ಕೋಗಿ– ಲೇ!"
ಉಗುರಿನಲ್ಲಿ – " ಕೋಗಿ–ಲೇ!"
ನುಂಗುವಾಗ – " ಕೋಗಿ–ಲೇ!"
ಉಗುಳುವಾಗ – ಕೋಗಿ–ಲೇ!"

ಕೊಳದ ಬಳಿಯ ಬಕಗಳೆಲ್ಲ
ಕಾಡೊಳಗಿನ ವೃಕಗಳೆಲ್ಲ
ಹಕ್ಕಿ ಗಿಕ್ಕಿ ಮೃಗಪಶುಗಳು
ನೀರು ನೆಲ ತರಲತೆಗಳು
ಸ್ವರ್ಗ ಮರ್ತ್ಯ ಪಾತಾಳ
ದೇವ ನರ ಭೇತಾಳ
ಹಾಕಿದರೋ ಒಂದೆ ತಾಳ
ಎನ್ನುವಂಥ ಕೂಗು ಭಾಳ:
" ಕೋಗಿ–ಲೇ! ಕೋಗಿ–ಲೇ!"
ಎಂಥ ಹೆಸರು ಹಕ್ಕಿಗೆ!
ಎಲ್ಲಿ ನೋಡಲೆಲ್ಲಿ ಕೇಳ –
ಲಾರು ಬಾಯಿ ತೆರೆದರೂ:
" ಕೋಗಿ–ಲೇ! ಕೋಗಿ–ಲೇ!"
ಎಂಥ ಹೆಸರು ಹಕ್ಕಿಗೆ!

– ೪ –

ಮರುದಿವಸವೆ " ಹೋ! ಕೋಗಿಲೆ ನಾನು!"
ಎನ್ನುವ ಭ್ರಾಂತಿಗೆ ಬಲಿಯಾಗಿ

ಕಾಗೆ ಹಾರಿಬಂತೆಲ್ಲ ಹಕ್ಕಿಗಳು
ಗುಂಪುಕೂಡಿ ಕುಳಿತೆಡೆಗಾಗಿ.

ಸಾ–ಪಾ–ಸಾಗಳ ಕೂಗುವೆನೆಂದು
ಕಾ–ಕಾ–ಕಾಗಳನಾ ಕಾಗೆ
ಕೂಗಲು, ಕವಣೆಗೆ ಬೆದರಿ ಚೆದರಿದಂ–
ತೆಲ್ಲವು ಕಣ್ಮರೆ – ಕ್ಷಣದಾಗೆ!

ಧೈರ್ಯಗೆಡದೆ ತಾ ಸಿಗ್ಗುಪಡದೆ ತಾ–
ನೆಲ್ಲಿ ಹಕ್ಕಿ ಹತ್ತಿದ್ದರಲ್ಲಿ ಎಲ್ಲ
ಹಾಡಹೋಗುವುದು ಕಾಗೆಗಾಯಕ
ಕಾದ ಸೀಸವನು ಕಿವಿಗೆ ಸುರಿದ ಸೊಲ್ಲ.

ಒಂದು ಎರಡು ಮೂರೆಂಟು ಹತ್ತು ಹದಿ–
ನೆಂಟು ಹಗಲುಗಳು ಉರುಳಿ ಉರುಳಿ ಉರುಳಿ–
ಕಾಗೆ ತನ್ನ ಕಲಕಂಠತನಕೆ ಖಗ–
ಜಾತಿ ಹುಚ್ಚದುದ ಕಂಡು ರೋಸಿ ಕೆರಳಿ–

ದೂರು ತಂದಿತು ಮತ್ತೆ ಗರುಡನೆಡೆಗೆ,
ಕಾಗೆ ಬಂದು ಕೈಮುಗಿಯುತಡಿಗೆ ಅಡಿಗೆ;

"ದೇವರ ದಯೆಯೋ ಶಾಸನ ಬಲವೋ
ಕಾಗೆಯನೆಲ್ಲರು 'ಕೋಗಿಲೆ' ಎನುವರು, ಭೋ!
ಕೊರತೆಯಿನಿತೆ ನನ್ನೆದೆಯನು ಕೊರೆವುದು–
ಈ ಕಲಕಂಠಕೆ ಕಿವಿ ಕೊಡರಯ್ಯೋ, ಹೋ!"

ದೂರ ಕೇಳಿ, ತಲೆದೂಗಿ ಪಕ್ಷಿರಾಜ
ಹೇಳಿತೇನು ತಪ್ಪದುವೆ ತಾನೆ ಸಾಜ!

“ಮನಸಿಗೆ ಬಂದುದ ಹೆಸರಿಸಿ ಕರೆಯಲು
ದೇವರ ದಯೆ ಬೇಕೆ? ಶಾಸನಬಲ ಬೇಕೆ?
ಹೆಸರಿಗೆ ಹೊಂದುವ ಗುಣಗಣಕಾದರೆ
ಪೂರ್ವಸುಕೃತ ಬೇಕು! ಪುಣ್ಯದ ಬಲ ಬೇಕು!”

ಎಂಬ ತತ್ತ್ವವನ್ನೆತ್ತಿ ಗರುಡಪಕ್ಷಿ
ಗಿಳಿಯ ಕರೆದು “ಹೇ ಕವಿಯೆ! ನೀನೆ ಸಾಕ್ಷಿ!

“ಪಂಡಿತವಕ್ಕಿಯೆ! ಹೇ ಅರಗಿಳಿಯೆ!
ಹೇಳು ಕಾವ್ಯದಲ್ಲಿ? ಹೇಳು ಶಾಸ್ತ್ರದಲ್ಲಿ?
ಕೋಗಿಲೆಯಾಗಲು ಬಯಸುವ ಕಾಗೆಗೆ
ಇಹದಲೇನು ಮಿತಿಯೊ? ಪರದಲೇನು ಗತಿಯೊ?”

– ೫ –

ರಾಜನಾಜ್ಞೆಯ ಕೇಳಿ ಆಸ್ಥಾನಕವಿ ಗಿಳಿಯು
ಪಕ್ಷಗಳ ತಾ ಮುಗಿದು ಗಂಭೀರ ವಿನಯದಿಂದೆ:
“ಇಹಗತಿಯ ಮಿತಗೊಳಿಸಿ ಪರಗತಿಯನೊಳಿಬೆಳಸಿ
ವಿಷ್ಣುವಾಹನರಾದ ತಮ್ಮಡಿಯ ಮುಂದೆ –
**ಪರಗತಿಯೆ ಪಂಕದಲಿ ಪದಭಂಗ ಬೇಡೆಂದೆ**
**ಸ್ವಗತಿಸಲಿಲ ಸ್ನಾನವೇ ಶ್ರೇಯವೆಂದೆ.”**
ಎನಲು, ಸಿಗ್ಗಾಗಿ, ಕರಿ ಕಾಗೆ ಕೆಂಪಾಗಿ, ಹಿಂ –
ದಿರುಗಿದುದು ತನ್ನದೇ ಕಾಗೆತನಕಂದಿನಿಂದೆ.

# ಮಂತ್ರಿಯಾಯಿತಾನೆ !

ಒಂದು ಅರಣ್ಯ, ಅಲ್ಲೊಂದಾನೆ.
ಸಿಂಹವೊಂದು ಸಲ ಸ್ವಯಂ ತಾನೆ
ಹೇಳಿಕಳಿಸಿತು. " ಹೇ ಗಜವರ್ಯ!
ನಮ್ಮರಮನೆಯಲಿ ಮಂತ್ರಿಯ ಕಾರ್ಯ
ನಿನಗೇ ಕಾದಿದೆ. ಇದ ನೀ ಕೈಕೋ!"
ಆನೆ ಬಿಡುವುದೆ? ಒಪ್ಪಿತು: " ಓ ಹೋ!"

ಕಾಡೊಳು ಸುದ್ದಿ ಹರಡಿತು – ಆನೆ ಮಂತ್ರಿಯಾಯಿತೆಂದು.
ಕೇಳಿದ ಕೂಡಲೆ ಮಿಕ್ಕ ಮೃಗಗಳು ಹೊಟ್ಟೆಯುರಿಗೆ ಬೆಂದು,

ಬೆಟ್ಟದ ತುದಿಯಲಿ ಸಭೆಯ ಕರೆದು ನೆರೆದು,
ಆನೆಯ ಸುದ್ದಿಯ ಹಿಡಿದು ಹಿಸುಕಿ ಹರಿದು,
ಕರಡಿ ಹೇಳಿತು:
" ಕರಿಯ ಬಣ್ಣ ಕರಿಗೂದಲು ಬೇಕೇ ಮಂತ್ರಿಯಾಗುವನಿಗೆ –
ನನ್ನ ಬಿಟ್ಟು ಈ ಆನೆಯಾಯ್ತು – ಘೋರಾಪಮಾನ ನನಗೆ!"
ಬಾಲ ಬಿಚ್ಚಿ ಬಿಡುಬೀಸಿ ಹೇಳಿತು ಕೋತಿ – " ನನ್ನ ಜೊತೆಗೆ
ಉದ್ದಮೂಗಿನೀ ಆನೆ ನಿಲುವುದೆ?
ಏನು ಬಂತೊ ನಾ ಕಾಣೆ ನಮ್ಮ ಮೃಗರಾಜನವನ ಮತಿಗೆ!"
ನೆಗೆಯಿತಾ ನರಿ ತೋಕೆ ತೂಗುತ – " ಇದುವೆ ನನ್ನ ಸವಾಲು!
ಅತ್ತ ಕರಟಕ! ಇತ್ತ ದಮನಕ!

ಇಂಥ ವಂಶದಲಿ ಹುಟ್ಟಿದವಗದೇ ಮಂತ್ರಿತನದ ಮಾಲು !"
" ಪಟ್ಟಿಯಿರುವುದೆ ಆನೆ ' ಗೆಂದಿತು ಹುಲಿಯು ಗರ್ಜಿಸುತ್ತ !
ಹಾವು ಭುಸುಗಿತು – " ಆನೆಗಿರುವುದೇ ನನ್ನ ಹಾಗೆ – ಹುತ್ತ ?"
ಮೃಗನ ಜಾತಿ ತಾನಲ್ಲದುದನು ಮರೆತಿದ್ದು ರೆಕ್ಕೆ ಬಡಿದು,
ಹದ್ದು ಗೊರಗಿತು – " ಮಂತ್ರಿಪದವಿಗೆ
ಎಲ್ಲಿ ತಂದರೋ ಹಾರಲಾರದೀ ಆನೆ ಮೃಗವ ಹಿಡಿದು !"
ಮೆಲ್ಲನೆದ್ದಿತು ಗುಟುರು ಹಾಕುತ ಮಲೆಯ ಮೈಯ ಗೂಳಿ :
" ಸದ್ದು !" ಎಂದಿತು ; " ಇದರ ಗುಟ್ಟ ನಾ ಹೇಳುತೇನೆ, ಕೇಳಿ.
ಕೊಂಬುನೋಡಿ ಈ ಆನೆಗಿತ್ತರು ಮಂತ್ರಿಪದವಿಯನ್ನ.
ಕೊಂಬಿನಿಂದಲೆ ಆನೆಗಾಯಿತು ನನ್ನ ಪಾಲಿನನ್ನ."
ಅಲ್ಲೆ ಪಕ್ಕದಲೆ ಕಾಲು ಚಾಚಿದ ಉದ್ದ ಕಿವಿಯ ಕತ್ತೆ
ಕಿವಿಯ ಪಟಪಟನೆ ಬಡಿದು ಹೇಳಿತು : " ಸತ್ಯ ಏನು ಗೊತ್ತೆ ?
ನನಗೆ ಉದ್ದ ಕಿವಿ ! ಆನೆಗಗಲ ಕಿವಿ ! ಇಷ್ಟೆ ನೋಡಿ ವ್ಯತ್ಯಾಸ !
ಕಿವಿಯನರಿಯದೀ ಸಿಂಹರಾಜ್ಯದಲಿ ಆಯ್ತು ನನಗೆ ಮೋಸ !"

ಇಂತು ನಡೆಯಿತು ಕಾಡಿನಲಿ ಸಭೆ –
ನಡೆಯಿತಾನೆಯ ಖಂಡನ !
ಖಂಡಿಸುವ ನೆಪದಲ್ಲೆ ನಡೆಯಿತು –
ಸ್ವಪ್ರತಿಷ್ಠೆಯ ಮಂಡನ !

# ಕೋತಿಗಳೂ ಕೋಟಿಗಳೂ

**ಗಾಂಧಿಜಿ ಕಿ ಜೈ!**

೦೩ -- ಕೋತಿ ಬಂದುವು
ಬಂದು ಕುಳಿತವು
ಗಾಂಧಿಜೀಯ ಮುಂದೆ!

೩೩ – ಕೋಟಿ ಬಂದುವು
ಬಂದು ನಿಂತವು
ಗಾಂಧಿಜೀಯ ಹಿಂದೆ!

ಬಂದ ಕೋತಿಗಳು ಬಾಲ ಮುದುರಿಕೊಂ –
ಡಲ್ಲೆ ಕುಳಿತವೋ ಸಾಲಾಗಿ!
ನಿಂದ ಕೋಟಿಗಳು ಬಾಲ ಬಿದಿರಿಕೊಂ –
ಡಲ್ಲೆ ಕೆದರಿದವೋ ಹೋಳಾಗಿ!

ಒಂದು ಕೋತಿ ತನ್ನೆರಡು ಕೈಗಳಲೆ
ಮುಚ್ಚಿತು ತನ್ನಯ ಕಿವಿಯೆರಡ! – ಮ –
ತ್ತೊಂದು ಕೋತಿ ತನ್ನೆರಡು ಕೈಗಳಲೆ
ಮುಚ್ಚಿತು ತನ್ನಯ ಕಣ್ಣೆರಡ! – ಉಳಿ –
ದೊಂದು ಕೋತಿ ತನ್ನೆರಡು ಕೈಗಳಲಿ
ಮುಚ್ಚಿತು ತನ್ನಯ ತುಟಿಯೆರಡ!

" ಕೇಳಿವಾವುದೂ ಕೆಟ್ಟುದ ನಾವ್ !
" ನೋಡೆವಾವುದೂ ಕೆಟ್ಟುದ ನಾವ್ !
" ನುಡಿಯೆವಾವುದೂ ಕೆಟ್ಟುದ ನಾವ್ !"

ಎಂದು ಬಾಲಗಳ ಮಡಿಚಿ ಮುದುರಿಕೊಂಡು,
ಅಡಗಿ ಕುಳಿತವು ಮೂರು ಕೋತಿ ಹಿಂಡು.

ಹ–ನ್ನೊಂದು ಕೋಟಿ ತನ್ನೆರಡು ಕೈಗಳಲಿ
ಮುಚ್ಚಿ ಜೊತೆಯವರ ಕಿವಿಯೆರಡ ; – ಮ –
ತ್ತಷ್ಟು ಕೋಟಿ ತನ್ನೆರಡು ಕೈಗಳಲಿ
ಮುಚ್ಚಿ ಅವರಿವರ ಕಣ್ಣೆರಡ ;– ಉಳಿ –
ದಷ್ಟು ಕೋಟಿ ತನ್ನೆರಡು ಕೈಗಳಲಿ
ಮುಚ್ಚಿ ಮಿಕ್ಕವರ ತುಟಿಯೆರಡ !
ಕೂಗಿತದೆಕೊ ಕೇಳ್ – ಗಗನ ಬಿರಿವವೋಲ್ :
" ಗಾಂಧಿಜೀ ಕಿ ಜೈ ! ಜೈ !"
ಕತ್ತೆ ಕುದುರೆಗಳು ಕೇಳಿ ಕೆನೆದುವು :
" ಬೂಟಾಟಿಕೆಯಿದು ! ಹೈ ! ಹೈ !"

ಕಣ್ಣ ಮುಚ್ಚಿದಾ
ಕಿವಿಯ ಮುಚ್ಚಿದಾ
ತುಟಿಯ ಮುಚ್ಚಿದಾ
ಮೂರು ಕೋತಿ ಸಾಲು –

ನೋಡಲಿಲ್ಲವದ
ಕೇಳಲಿಲ್ಲವದ
ನುಡಿಯಲಿಲ್ಲವದ
ಕುರಿತು ಅರ್ಥ ಕಾಲೂ !

“ ಮೌನವಿದುವೆ ಸರ್ವಾರ್ಥಸಾಧನ!
ಮೌನವೆ ನೊರೆಹಾಲು!’
ಎನ್ನುತ್ತಿದ್ದುವಾ ಗಾಂಧಿಯೊಡನೆ ಆ
ಮೂರು ಕೋತಿ ಸಾಲು!

# ಶಾಮಣ್ಣನಂಗಿ

ಶಾನುಣ್ಣನಂಗಿ ಮೊಳಕೈ ಹತ್ರ ತೂತ್ತೂತಾಗಿತ್ತು!
ನೋಡ್ದೋರೆಲ್ಲ ಗೊಳ್‌ಗೊಳ್ಳಂತ ನಗೋ ಹಾಗಾಗಿತ್ತು!

" ನಿಲ್ಲಿಸ್ದಿದ್ರೀ ನಗುವನ್ – ನಾನ್ಯಾರ್ ಶಾಮಣ್ಣಲ್ವೇನ್ರೋ!
ಸೂಜೀದಾರ ತರ್ತೀನ್ ತಾಳಿ! ಅಮೇಲ್ ನೋಡ್‌ಬನ್ರೋ!"

ಅಂತಂದೋನೆ ನಂ ಶಾಮಣ್ಣ—

ತೋಳ್ನಲ್ ಒಂದಿಷ್ಟು ಕತ್ತರಿಸಿದ್ದೇ ತೇಪೆಹಾಕ್ದ ಮೊಳಕೈಗೆ!
ಅಂಗಿ ತೊಟ್ಕೊಂಡ್ರೇನಾಭಾಸ – ತೋಳೇ ಸಾಲ್ದು ಮುಂಗೈಗೆ!

ನೋಡ್ದೋರೆಲ್ಲ ಹಲ್‌ಹಲ್ ಕಿರಿದ್ರು! ಶಾಮು ಇರಲೀಂತಂದವನೆ –
ಕೋಟ್ ಜೇಬ್‌ಹತ್ರ ಪರ್‌ಪರ್ ಹರ್ದು ತೋಳ್ಕಿಟ್ಕೊಂಡು ಬಂದವನೆ!

ಮೊಳಕೈ ಮುಚ್ದು! ತೋಳ್ನೂ ಮುಚ್ದು!
ಆದ್ರೇನ್? ಕೋಟ್ಗೆ ಉದ್ದಾನೇ ಸಾಲ್ದು!

ಬೀದಿಯೋರೆಲ್ಲಾ ಬಿದ್‌ಬಿದ್ ನಕ್ರು:
'ಶಾಮಣ್ಣಂಗೆ ಬುದ್ಧೀನೆ ಸಾಲ್ದು!'

ಅದಕವ್ನಂದ. 'ಯಾಕ್ ನಗ್ತೀರೋ?
ನಿಂ ಕೋಟ್ ಉದ್ದ! ನೆಲ ಗುಡಿಸೋ ಪೊರಕೆ!

ನನ್ ಕೋಟುದ್ದ ಸರಿಯಾದ್ ಅಳತೆ!
ಇದು ನಿಮಗೆಲ್ಲ ಅರ್ಥವಾಗೋ ಸರಕೆ?'

× × × ×

ಅಲ್ಲಿಂದೀಟಿಗ್ ಯಾರಾರೂವೆ
ಕುಲಗೆಡಿಸಿದ್ರೆ ಕೈಹಿಡಿದಿದ್ ಕೆಲಸ
ನೋಡ್ದೋರೆಲ್ಲ ಬಿದ್‌ಬಿದ್ ನಕ್ಕು –
'ಶಾಮಣ್ಣನಂಗಿ' ಅಂತಾರಾ ಹೊಲಸ!

# ದುಃಖಿಸೀಟು

( ಶ್ರೀ ಶ್ರೀಯೈ ನಮಃ )

ಅನಾಥ ಇವನಿನ್ನೊಬ್ಬ
　　ಈ ಬಸ್ಸು ರೋಸಿ,
ವೇದನೆಯ ತಾಳದೆಯೆ
　　ಹಾರಿದನು ಹೊರಗೆ.

ಅಲುಗಿಸಿವನನು ಕುಲುಕು
　　ಮುದುರಿ ಹಿಡಿದೆತ್ತು.
ಏನು ಕೈಕಾಲ್ ಗಾಯ!
　　ಯಾವನೀ ರಾಯ ?
ನೋಡು ಮೈಯೊಳು ಉಡಿಗೆ
　　ಹಿಸಿದು ಹರಿದಿಹುದು ;
ಕೈ ಕಾಲು ಕೊರಳುಗಳು
　　ತಿರಿಚಿ ಮುರಿದಿಹುವು.
ಎದೆಕರಗು, ಬಾ, ಎತ್ತು –
　　ಕ್ಯಾಕರಿಸದೊಲಿದು.

ದುಡುಕಿ ಕ್ಯೂವನು ಮೀರಿ
ದೌಡುಬಸ್ಸನು ಏರಿ
　　ಕೆಟ್ಟವನು ಇವನು,

ತಾನು ಮಾಡಿದ ಕರ್ಮ
ತನ್ನ ಬೆನ್ನಲಿ ಬಂದು
ಸುಟ್ಟಿವನು ಇವನು –
ಎನುತ ದೋಷವ ಬೆದಕಿ
ಗದರದಿರು ನೀನು.
ಅವನ ಕೋಟಲೆ ಏನೊ,
ಅವಸರವದೇನೋ!
ಆದರೆಣಿಕೆಗಿದೆ ಹೊತ್ತು?
ನಾವೆ ಜರೆವವರು?
ಇವನ ಹಾಗೆಯೆ ಹತ್ತಿ
ಓವರ್‌ಲೋಡ್ ಎಂದಾಗಿ
ನಾಳೆ ಬರುವವರು?

ಯಾರಿವನು? ಮನೆಯೆಲ್ಲಿ?
ಸ್ವಂತವೊ? ಬಾಡಿಗೆಯೊ?
ರೇಷನಿನ ಕಾರ್ಡುಂಟೊ?
ಏ ಕ್ಲಾಸೊ? ಬೀಯೊ?
ಪಂಚೆಗಳು ಷರ್ಟುಗಳು
ಒಂದೊಂದೆ ಇವೆಯೊ?
ಇನ್ನು ಅಕ್ಕರೆಯಾಕೆ
ಜೊತೆಗೆ ಹತ್ತಿರದಾಕೆ
ಮತ್ತಿಬ್ಬರಿಹರೊ?
ಕಾಲೆಜ್ ಓದುವ ಹುಡುಗ
ಮದುವೆ ವಯಸಿನ ಹುಡುಗಿ
ಇವಗಿರುವರೇನೊ?

ಆಹ, ಎಲ್ಲಡಗಿತೋ
ಆರ್ಯಧರ್ಮದ ಕರುಣ!

ಆರ್ಯಜನಗಳ ಮರುಕ!
ಉರಿಯುವನೆ ಬಲ್ಲ!
ಅಯ್ಯೊ, ಏನನ್ಯಾಯ!
ತುಂಬಿದೀ ಬಸ್ಸಲ್ಲಿ
ಸೀಟ್ ಇವನಿಗಿಲ್ಲ!
ಎಷ್ಟು ಓವರ್‌ಲೋಡು!
ಸೀಟ್ ಇವನಿಗಿಲ್ಲ!
ಅನಾಥ, ಹಾ, ದಿಕ್ಕಿಲ್ಲ!
ರಸ್ತೆಯೇ ಶರಣು!

ತುಂಬೆ, ಎಕ್ಕೆಯ ಗಿಡವ
ಹತ್ತ ಹೆದರುವನು,
ಮನೆಯ ಮೆಟ್ಟಿಲು ಮೂರ
ಇಳಿಯ ಹೆದರುವನು,
ಬೆಚ್ಚಿದನೆ, ಬೆದರಿದನೆ,
ಹೆದರಿದನೆ ಆಹಾ,
ಬಸ್ಸಿನಿಂ ದುಮುಕೆ?
ಎಲ್ಲಾದರೂ ಸರಿಯೆ,
ಎಲ್ಲಾದರೂ ಸರಿಯೆ,
ಈ ಬಸ್ಸು ಬೇಡೆಂದು
ಹಾರಿದನು ಹೊರಗೆ.

ಹಾರಿದನು, ಉರುಳಿದನು,
ಎಗರಿ ಮುಗ್ಗುರಿಸಿದನು,
ನಡುರಸ್ತೆಯೊಳಗೆ.
ಎಲವೊ ಡ್ರೈವರೆ, ಕಟುಕ,
ಇಲ್ಲಿ ಬಾ, ನೋಡು ಬಾ,
ಎಲಿ ಬೆಚ್ಚಗೆ ಕುಳಿತು

ಸ್ಟೀರು ಮಾಡುತಿಹೆ?
ಸ್ಪೀಡು ಓಡುತಿಹೆ?
ಈಗ ಬಾ, ನೋಡು ಬಾ,
ಇವನೊಡನೆ ದುಮುಕು ಬಾ,
ದುಮುಕು ಬಾ, ಪಾಪಿ.

ಅಲುಗಿಸಿವನನು ಕುಲುಕು,
ಮುದುರಿ ಹಿಡಿದೆತ್ತು.
ಏನು ಕೈ ಕಾಲ್ ಗಾಯ!
ಯಾವನೀ ರಾಯ?
ಕೈಕಾಲುಗಳ ಸವರಿ
ಮೃದುವಾಗಿ ಮಡಿಸು.
ಬಿರುಗಣ್ಣ ನೋಟವನು
ರೆಪ್ಪೆಯಲಿ ಕವಿಸು.
ತಳ್ಳುವರ, ತಿವಿಯುವರ,
ಮುಳಿಯುವರ, ತುಳಿಯುವರ,
ತಾ ತಾಳಿ ತಾಳಿ,
ಹಲ್ಲುಮುಡಿಯನು ಕಚ್ಚಿ
ಕಲ್ಲುಮನಸಾದಾಗ
ನೆಟ್ಟುದೀನೋಟ!

ಮುಂದ ಬಲ್ಲವರಾರು?
ಇಂದಾಯ್ತು ಶಾಂತಿ.
ಬಸ್ಸು ಮಾಡುವುದಿರಲಿ –
ನಾವು ಮಾಡುವ ಹಿಂಸೆ
ಆದೆ ನರಕಹಿಂಸೆ!

ಕ್ಯೂವಿನಲಿ ನಿಲ್ಲದೆಯೆ
ನಡುವೆ ನುಗ್ಗುವ ಜನರ
ನಾವು ಧಿಕ್ಕರಿಸುವೆವು !
    ದೂರ ಅಟ್ಟುವೆವು !
ಅಟ್ಟನಾ ರೀತಿಯಲಿ
    ತಂದೆ – ಡಾಕ್ಟರನು.
ದೈನ್ಯದಲಿ ಮೌನದಲಿ
ತನ್ನ ಪಾಪವನೊಪ್ಪಿ
ಮರೆಹೊಗುವನಾಥನನು
ಎದೆಯಲ್ಲಿ ಕೈಮುಗಿಸಿ
    ಅವನ ಬಳಿ ಕಳುಹು,

# ಬಡಿಸು ತಾಯಿ

( ಶ್ರೀ ವಿ. ಸೀ. ಅವರ ' ಕಣ್ತುಂಬ ನೋಡೆಮ್ಮ ಹರಸು ತಾಯಿ 'ಯ ಕ್ಷಮೆ ಕೇಳಿ )

ಕೈತುಂಬ ನೀಡೆಮಗೆ ಬಡಿಸು ತಾಯಿ
– ಹೇ ಅನ್ನಪೂರ್ಣೇಶ್ವರೀ, ಬಡಿಸು ತಾಯಿ.

ಹತ್ತು ಮೂವತ್ತಾಯ್ತು – ಮಿಲ್ಲುಗಳ ತಾರಸರ
ಒಗ್ಗೊರಲ ಮೇಳದಲಿ ಮೊಳಗುತಿದೆ ಕೇಳಾ!
ಮೊಳಗುತಿದೆ ಸ್ವಾತಂತ್ರ್ಯ ಕೊನೆಗೊಂಡಿದೆನ್ನುತ್ತೆ
ಸಕಲ ಶಾಲೆಗೆ ವೇಳೆಯಾಯಿತೆನುತೆ!

ಇಷ್ಟವಿಲ್ಲದ ಮನದಿ ಅಡಿಗೆಯೊಲೆ ಉರಿಯುತಿರೆ
ಹೊಗೆಯೂದಿ ನೀ ಅಟ್ಟ ಪರಿಯ ನೋಡಾ!
ಹತ್ತುದಿಕ್ಕಿನ ಗಾಳಿ ಹೊತ್ತ ಪರಿಮಳವೆರೆವು
ಮೂಗುಗಳ ಅರಳಿಸುತ ಕೆಣಕುತಿವೆ ನೋಡಾ!

ಅನ್ನ ಪಲ್ಯಗಳೆನದೆ ಹುಳಿಯೆನದೆ ಕೂಟೆನದೆ
ನಿನ್ನ ಅಡುಗೆಯು ನಿಂತ ನಿಲುವ ನೋಡಾ!
ಬಿಸಿಬಿಸಿಯ ಸವಿರಸದ ಹೆಮ್ಮೇಳ ಹರಡಿರಲು
ಭೂಮಿಯಾಕಾಶಗಳ ಪುಳಕ ನೋಡಾ!

ತಪ್ಪಲೆಯ ಆಳಕ್ಕೆ ಅಡಿಯೂರಿ ಮೇಲನ್ನ
ಧವಳಗಿರಿಯಾಗಿರುವ ಪರಿಯ ನೋಡಾ!
ನಿನ್ನ ಸಾರಿನ ಕಲಶ – ಅದರ ಪರಿಮಳ ಕೀರ್ತಿ
ಮೇರುಗಿರಿಯಲಿ ನಟ್ಟ ವಿಭವ ನೋಡಾ!

ಸೋಮೇಶ ಸುಬ್ಬಣ್ಣ ಗಂಗೆ ತುಂಗೆಯರೆಲ್ಲ
ಸ್ಕೂಲು ಹೋಗುವರಿವರ ನೆರವಿ ನೋಡಾ!
ಬಡಿಸಿದೆಲೆಗಳ ರಾಜ್ಯ ಸಾಮ್ರಾಜ್ಯವಾಗುತಿರೆ
ಮುಖವೆಲ್ಲ ತೃಪ್ತಿಯನು ತುಳುಕುತಿದೆ ನೋಡಾ!

ಓ ಅನ್ನಪೂರ್ಣೇಶ್ವರೀ!
ಹೋ ಎಂಬ ಜಯಶೇಗು ಕೇಳಾ!

# ತೊಗರಿಬೇಳೆಯ ಕಾಳುಗಳು

( ಶ್ರೀ ಕುವೆಂಪು ಅವರ ‘ ಮಿಣುಕು ಹುಳು ’ ಗಳಿಗೆ ಕೈಮುಗಿದು )

— ೧ —

ಮೂಗನು ತಿವಿಯುವ ಒಗ್ಗರಣೆಯ ಘಮ—
ಮೆದ್ದಿತು, ಇದ್ದುವು
ಮನಗಳು ಗಾಢ ಕ್ಷುಧಾಬ್ಧಿಯಲಿ.
ಮೌನವು ಹಸಿವಿನ ಮಡಿಲೊಳಗಿದ್ದಿತು.
ಭೇದನ ನೀಗಿ,
ಅತೀತವಾಗಿ,
ಹೊಟ್ಟೆಯೊಳೆಲ್ಲವು ಲಯವಾಗಿ,
ಅಗುಳುಗಳೆಲ್ಲವು ಒಂದಾಗಿ,
ಅನ್ನವೆ ಗೂಢಸಮಾಧಿಯ ಸೇರಿ
ಇದ್ದಿತು ಸಾರಿನ ಜೊತೆಯನು ಕೋರಿ.

— ೨ —

ಮೇರೆಯೆ ಇಲ್ಲದ ಸಾರಿನ ಕಡಲೊಳು
ಮಿಣುಕಿ ಮಿಣುಕಿ
ಬೇಸಗೆ ಮಳೆಯಾ ಹನಿಯಂತೆ,
ತೊಗರಿಯ ಬೇಳೆಯ ಕಾಂತಿಯ ಕಾಳ್ಗಳು

ಹೊಳೆದು, ಅಳಿದು,
ಅಳಿದು, ಹೊಳೆದು,
ಚಿಮ್ಮುತ ಎಲೆಯಿಂದೆಲೆಯೆಡೆಗೆ,
ಚಿಮುಕಿಸಿ ಎಂಜಲನಡಿಗಡಿಗೆ,
ಕುಣಿಯುತ, ಮಿಣುಕುತ ಮನಸನು ಸೆಳೆದು
ಮೆರೆದುವು ತೊಗರಿಯ ಮಣಿಗಳು ಹೊಳೆದು.

– ೩ –

ಬೇಳೆಯ ಸಾರೊಳು ಕಾಳುಗಳೆಸೆದವು :
ತೇಲುವ ಸಾಸುವೆ
ಅವುಗಳನಣಕಿಸಿ ಮಿಣುಕಿದವು ;
ಸವುಟನೊಳಗೆ ಮುಳುಗೇಳುತ ಮಿಣುಕುತ
ಇದ್ದೆಡೆಯಲ್ಲೆ
ಬಾರದೆ ಅಲ್ಲೆ
ಒಣಗಿದ ಚಿನ್ನದ ಲತೆಯಿಂದ
ಉದುರಿದ ಸುಮಂಗಳ ತೆರದಿಂದ
ಗಡಿಬಿಡದಾ ಬಿಡಿ ಸೈನಿಕರಂತೆ
ಹೊಳೆದುದು ಬೇಳೆಯ ಕಾಳ್ಗಳ ಸಂತೆ.

– ೪ –

ಎವೆಯನು ಮುಚ್ಚದೆ, ಚಲಿಸದೆ ಸುಮ್ಮನೆ
ನೋಡಿದೆ ; ನೋಡಿದೆ,
ಕಾಳುಗಳಾಟವ ವೈಖರಿತು.
ಹಸಿವಾವೇಶಾನಂದದ ಲಹರಿ
ಚಿತ್ತದಿ ಮೊರೆದು,
ಎದೆಯೊಳು ಉರಿದು,

ಕರಗಿಸಿತೆನ್ನೀ ವ್ಯಕ್ತಿಯನು,
ದೊರಕಿಸಿತೆನಗಾ ಭುಕ್ತಿಯನು.
ಚಿಮ್ಮಿದ ಕಾಳಿನೊಳಾನೊಂದಾಗಿ
ಮಿನುಮಿನುಗಿದೆ ಬೇಳೆಯ ಕಾಳಾಗಿ.

# ಕಾದಿರುವುದು ಕ್ಯೂಲ್ಯೂ !

( ಶ್ರೀ ವಿ. ಸೀ. ಅವರ ' ಶಬರಿ ' ಕಾದಂತೆ )

ಕಾದಿರುವುದು ಕ್ಯೂಲ್ಯೂ
ಬಸ್ಸು ಬರುವುದೆಂದು,
ತನ್ನ ಕರೆದುಕೊಳುವುದೆಂದು.

ಬೀದಿ ಬೀದಿ ಸುತ್ತಿ ಸುಳಿದು
ಪೇಟೆ ಪೇಟೆಯಲೆದು ತಿರಿದು
ಅಕ್ಕಿ ಬೇಳೆಯಾಯ್ದು ತಂದು
ಪಂಚೆ ಸೀರೆ ಬೆದಕಿ ತಂದು –

ಬೆವರಲ್ಲಿ ಮುಳುಗಿ ಮಿಂದು
ಬೀದಿ ದೂಳು ಬಟ್ಟೆಯುಟ್ಟು
ಬಸ್‌ಸ್ಟ್ಯಾಂಡಿಗೋಡಿ ಬಂದು
ಸಾಲಾಗಿ ನಿಂದು ನಿಂದು –

ಪುರ್ ಎಂದರೆಲ್ಲೊ ಗಾಳಿ
ಕಿವಿಯೆತ್ತಿ ಆಲಿಸುವುದು
ಪೊಂ ಎಂದರಾವ ಕಾರೋ
ಬಸ್ ಬಂತು ಎಂದು ಬಗೆದು –

ದೂರಕ್ಕೆ ನೋಳ್ಪೆನೆಂದು
ಮುಂಗಾಲ ಮೆಟ್ಟಿನಿಂತು,
ಬಸ್‌ಸ್ಟಾಪನೇರಿ, ಕೈಯ
ಮರೆಮಾಡಿ ನೋಡುತಿಹುದು –

ಬಾ ಬಸ್ಸೆ, ಬಸ್ಸೆ ಎಂದು
ಬರುತಿಹುದು. ಬಂತು ಎಂದು
ನಿಡುಸುಯ್ದು ತವಕಿಸಿಹುದು
ಕಳೆದಿಹವು ಗಂಟೆ ಹಲವು

× × × ×

ಕ್ಯೂ ಇಂತೆ ದಿನವು ದಿನವು
ದಿನ ರಾತ್ರೆ ಕರೆಯುತಿಹವು
ಕರೆಕರೆದು ಕಾದು ಕಾದು
ತಪಿಸುತ್ತ ಶಪಿಸುತಿಹುದು

ಭರವಸೆಗಳಳಿದು ಹೋಗಿ
ಕಾಲೆರಡು ಒನಕೆಯಾಗಿ
ನಿಂತಲ್ಲೆ ತೂಗಿ ತೂಗಿ
ಜೂಗಡಿಸಿ ಜಾಗರಾಗಿ

ಬಂದೀತೊ ಬಾರದೋ ಓ
ಸಿಕ್ಕೀತೋ ಸಿಕ್ಕದೋ ಓ
ಎಂದೆಂದು ಜಪಿಸಿ ಶಪಿಸಿ
ನಿಂತಲ್ಲೆ ಬೇರನೂರಿ –

ಬಾ ಬಸ್ಸೆ, ಬಾರ, ಬಾರಾ
ನಿಂತವರ ಒಯ್ಯೆ ಬಾರಾ
ಕಂಗಾಣದವರ ಪ್ರೇಮ
ಕಾಲ್‌ಸೋತ ಕುಂಟುಪ್ರೇಮ !

# ಕೋಳಿಯ ಗರಡಿ

– ೧ –

ಕೋಳಿ ಕೊಡಹಿತು ಜುಟ್ಟುತಲೆಯನು ;
ನಂಬಲಿಲ್ಲ ಶುದ್ದಿ.
ಕರೆದು ಹೇಳಿತು – ಗೆಳೆಯ ಗಾರ್ದಭನ
ಬೆನ್ನ ಮೇಲೆ ಗುದ್ದಿ :

" ಕತ್ತೆ ಕೆಳೆಯನೆ! ಒಂಟೆ ಮದುವೆಯಲಿ
ವಾದ್ಯಗಳನು ಮೆಟ್ಟಿ
ನೀನು ಹಾಡಿದುದನಾರು ಮರೆವರು !
ನೀನೆ ನಮ್ಮ ಜೆಟ್ಟಿ !

" ಈಗ ಯಾರೊ ಕಲಕಂಠನಂತೆ ! ಹೊಸ
ಪಕ್ಷಿಜಾತಿಯಂತೆ !
ಅದರ ಕೊರಲ ಸರ ಕಲ್ಪವೃಕ್ಷವೇ
ಬೆಳೆವ ಪಾತಿಯಂತೆ !

" ಊರ್ಧ್ವಗಾಮಿ ಖಗಕುಲಕೆ ಸಹಜ – ಉತ್
ಪ್ರೇಕ್ಷೆಗೈವ ಚಾಳಿ.
ನಂಬಲಾರೆನೀ ರೆಕ್ಕೆಮಾತುಗಳ –
ಎಲ್ಲ ಬರಿಯ ಗಾಳಿ.

“ ನನ್ನ ಹೆಸರ ನಾ ಹೇಳಬಾರದದು
 ವಿನಯವಲ್ಲ – ಇರಲಿ ,
ಗೆಳೆಯ! ನಿನ್ನ ಸತ್ಕೀರ್ತಿ ಕುಗ್ಗುವುದ
 ಹೇಗೆ ನೋಡುತಿರಲಿ ?

“ ನಾನೆ ಹೋಗುವೆನೆ – ವಾದ ಮಾಡುವೆನೆ –
 ಕಾಲು ಮುರಿದ ಕೋಳಿ
ಬಾಯಿ ತೆರೆದರತ್ತಂತೆ ನಗುವ ಮು –
 ತ್ತೈದೆಯೆದುರು –ಕೋಳಿ !

“ ಅಲ್ಲದುದನು ಯಾರೆಲ್ಲೆ ಹೇಳಿದರು,
 ಅಲ್ಲೆ ಅದನು ಚಿವುಟು ’–
ಇದುವೆ, ಗೆಳೆಯ, ನಾ ಕಲಿತ ವಿದ್ಯೆಯಲಿ
 ಒಂದು ಸಣ್ಣ ಸವುಟು.”

– ೨ –

ಮೋಟುಬಾಲ ಬೀಸಿಕೊಂಡು ಹೊರಟಿತು ಕತ್ತೆ.
ಕತ್ತೆಯಾದರೇನು ? ಮಾನವಿಲ್ಲವೆ ಮತ್ತೆ ?

“ ಎಲವೆಲವೋ ಕಲಕಂಠ ! ನೀನೆದುರಿಗೆ ಸಿಕ್ಕು !
ತೋರಿಸುವೆ – ನಿನಗೊಬ್ಬನಿಗೆಯೊ ಈ ಹಾಡುವ ಹಕ್ಕು !
ಲೋಕದೊಳೀ ನಾನಿರುವೆ – ಕೇಳಿರುವೆಯ ನನ್ನ ?
ನಾನಿರಲಿ – ಕೇಳಿರುವೆಯ ಕೋಳಿಯ ಹೆಸರನ್ನ ?
ನೀ ಗಂಡೆ ? ಭಯವಿಲ್ಲವೆ ? ಬಾ, ನೋಡುವ, ಹಾಡು !
ನನ್ನೆದುರಿಗೆ ಖಂಡಿತ ನಿನಗಾ ನಾಯಿಯ ಪಾಡು !”

ಎಂದು ಕೂಗಿ ಕತ್ತೆ ಬಂತು ಕೋಗಿಲೆಯೆಡೆಗೆ –
ಕೋಗಿಲೆ ತಾ ಹಾಡುತಿದ್ದ ತೋಟದ ಕಡೆಗೆ.

– ೩ –

ಕೊಂಬೆಮರೆಯಲಿ ಕುಳಿತು ಹಾಡುತಿರೆ ಕೋಗಿಲೆ –
ಎಲೆಯ ಕಪ್ಪಿನಲಿ ಕಪ್ಪಾಗಿ ಕರಗಿಹೋಗಿ –
ಅಶರೀರವಾಣಿಯಿಂದುದಿಸಿ ಬಂತಾಗ –

ಎಂಟು ಕಡೆಯಲಿ ಕಣ್ಣ ಸುಳಿಸಿದತ್ತತ್ತ
ಮುಗಿಲ ಕಡೆ ಮುಖಮಾಡಿ ತಲೆಯನೆತ್ತುತ್ತ

ಪರ್ವತದ ಪಕ್ಕದಲಿ ಪರ್ವತದ ಸಾಲು
ನಡುವೆ ಧುಮುಕುವ ಬಿಳಿಯ ಜಲಪಾತ ಹಾಲು –

ಮಲೆಯೆಲ್ಲ ಮೈತುಂಬ ಮಲೆತುನಿಂತ ಅರಣ್ಯ
ಏನ್ ವೃಕ್ಷವೃದ್ಧಿಯೋ ಎಣಿಸಲಾರೆ ಅಗಣ್ಯ –

ಮರವೆಲ್ಲ ಚಿಗುರಿ, ಚಿಗುರು ಎಲೆಯಾಗಿ,
ಎಲೆನಡುವೆ ಹೂವಾಗಿ, ಹೂವು ಕಾಯಾಗಿ,

ಕಾಯ್ ಕಳಿತು ಹಣ್ಣಾಗಿ, ಹಣ್ಣ ತನಿರಸ ಜಿನುಗಿ –
ನೀರಿನಲಿ ಮೀನೇನು! ನೆಲದಲ್ಲಿ ಮೃಗವೇನು!
ವಾಯುಮಾರ್ಗದೊಳಲೆವ ಪಕ್ಷಿಗಣವೇನು!

ಎಲ್ಲೆಲ್ಲು ಜೀವ! ಎಲ್ಲೆಲ್ಲು ಪ್ರಾಣ!
ಎಲ್ಲೆಲ್ಲು ಅದರದೇ ನಿತ್ಯಸಂಚಾರ!
ಎಲ್ಲೆಲ್ಲು ಅದರದೇ ಸತ್ಯಸಂಚಾರ!

– ೪ –

ಕೊರಳಿನ ಕದಗಳ ಮುಚ್ಚಿತು ಕೋಗಿಲೆ –
ಕತ್ತೆಗೆಚ್ಚರಾಯ್ತು!
ಮೈಯನೊದರಿ ಕಣ್‌ಬಿಟ್ಟು ನೋಡಿತು –
ಬಹಳ ಅಚ್ಚರಾಯ್ತು!

"ಎಲ್ಲಿ ಪರ್ವತ? ಎಲ್ಲಿ ಅರಣ್ಯ?
ಎಲ್ಲಿ ಹೋಯ್ತು ಆ ಸುಂದರ ಸುಖಲೋಕ?"
ಎನಲು, ಕೋಗಿಲೆ ಮೈಯ ಕಾಣಿಸಿ
ಕೇಳಿತಿಂತು – "ಹೋ! ಇನ್ನೂ ಇಷ್ಟು ಬೇಕ?"

ಕತ್ತೆ ಬೆಚ್ಚಿತು; ಬೆಚ್ಚಿ ಬೆದರಿತು –
ಕೋಗಿಲೆ ಮಾಡಿದ ಮಾಯಕ್ಕೆ.
ಆದರೇನು? ಛೆ! ಕತ್ತೆ ಕತ್ತೆಯೇ!
ಸಾಯುವುದೇ ಈ ಗಾಯಕ್ಕೆ!

ಹೇಳಿತಿಂತು ತಾ ಮುಸುಡಿ ತಿರುವುತ
ಮೋಟುಬಾಲ ಬೀಸಿ:
"ನಿನ್ನದೇನು ಮಹಾ! ಹಾಗೆ ನೋಡಿದರೆ –
ನಮ್ಮ ಕೋಳಿ ವಾಸಿ!

"ಎಚ್ಚರಾದವರ ಮೈಯ ಮರೆಯಿಸುವ
ಹಾಡು ಏನು ಹೊಲಸು!
ಮಲಗಿದವರ ಹೊಡೆದೆಬ್ಬರಿಸುವ ಗುಣ –
ಅದುವೆ ದಿವ್ಯ ಕೆಲಸ!

"ನನ್ನ ಕೂಡ ಬಾ, ನಮ್ಮ ಕೋಳಿ ಬಳಿ
ಕೊ ಕ್ಕೋ ಕೂಗ ಕಲಿತು
ಅಸಮನೆನಿಸುವೆ ಪಕ್ಷಿಜಾತಿಯಲಿ
ನಿನ್ನ ವಿದ್ಯೆ ಬಲಿತು."

ಎಂದು ಕರೆಯ ಕೊಟ್ಟಿರದೆ ಹೋಯಿತು
ಕತ್ತೆ ಬಾಲ ಬೀಸಿ.
ನಕ್ಕು ಕೋಗಿಲೆ ಮನವ ತಣಿಸಿತು
ಮಧುರ ಗಾನ ಸೂಸಿ.

# ಪತಂಗಪತನ

ಹಣತೆಯ ಬೆಳಕಿನಲೇನನೊ ಓದುತ
ಏನನೊ ನೆಯುತ್ತನೆ,
ಜ್ಞಾನಪಿಪಾಸು ಧ್ಯಾನಗೈಯುವೆಡೆ
ದೀಪಶಿಖಿಯ ಸುತ್ತ –

ರೆಕ್ಕೆಯ ಬಡಿಯುತ ಬಂತು ಪತಂಗ!
ಕೇಳಿದ: "ನೀ ಯಾರು?"
ಹೇಳಿತು: "ನಾನೆ? ಖಚರ ವಿಹಂಗ!"
ಕೇಳಿತು: "ನೀ ಯಾರು?"

ಹೇಳಿದ: "ಹಣತೆಯ ಬೆಳಕಿನಲಾಯುವೆ
ಅರಿವಿನ ಬತ್ತದ ಕಾಳ:
ಉತ್ತು ಬಿತ್ತಿ ಫಲವತ್ತುಗೈವೆ – ಎದೆ
ಬುದ್ಧಿ ಮನಸುಗಳ ಹಾಳ."

ನಕ್ಕು ಪತಂಗ, ಹೇಳಿತು: "ಮೂಢ!
ಆಯುವ ಈ ಕೆಲಸ
ಆಯುವ ಸವೆಸುವ ಗಾಂಪರಿಗಿರಲಿ!
ಛೀ! ತಳ್ಳೀ ಹೊಲಸ!"

ಹೇಳಿತು ಮತ್ತೆ: " ಹಣಕೆ ಹೆತ್ತಿರುವ
ನಿನ್ನ ನೆರಳ ನೋಡು.
ಎಣ್ಣೆ ಬತ್ತಿ ನೀನೆಷ್ಟು ವಹಿಸುವೆಯೊ –
ನೆರಳಿಗಷ್ಟು ಕೋಡು!

" ಗೀತೆ ಕಲಿಸಿದೆ ನೆರಳು ಬೆಳಕಿನೀ
ದ್ವಂದ್ವದ ಹುಟ್ಟೊರಸುವುದ,
ಅದರ ಸಾರವೀ ಪತಂಗಪಾರ್ಥನ
ಗರಿ ಗಾಂಡೀವದ ಸಬುದ!

" ಬೆಳಕುಬೀಜ ತಾ ನಾಶವಾಯ್ತೊ – ಅದೊ!
ನೆರಳುವೃಕ್ಷ ನಾಶ!
ಅರಿತರಿದನು ತೃಣಕಲ್ಪವಹುದು ಸಮ –
ವರ್ತಿಯೆಸೆದ ಪಾಶ!

" ಕಣ್ಣ ಮುಂದೆ ನಾ ಕಲ್ಲನೆಸೆದು ತನಿ –
ವಣ್ಣ ಕೆಡಹಿಕೊಡುವೆ!
ತಾಪಗೊಳುವ ನಿನಗಾಗಿ ನೋಡಿದೋ –
ನೆರಳ ಛತ್ರಿ ಹಿಡಿವೆ!

" ಕೃಷ್ಣನು ನಾನೇ! ಪಾರ್ಥನು ನಾನೇ!"
ಎನ್ನುತ ನುಗ್ಗಿ ಪತಂಗ –
ಮರೆತು ಸ್ವಪಕ್ಷದ ಮಿತಿಯ, ಪಾಪ, ತಾ
ಭ್ರಮಿಸಿತು: ತಾನೆ ವಿಹಂಗ!

ಪಾರ್ಥನ ಮುಂದಿನ ಪಾರ್ಥಸಾರಥಿಯ
ಮುಂದಿನ ರವಿಸುತನ
ನೆನಪುಗುಡುತ, ಸಂಪಾತಿಯ ಸೋಲಿಸಿ
ಮರೆಸಿತದರ ಪತನ!

ಮಾತು ನಿಂತಿತಾ ಮುಲುಕು ನಿಂತಿತಾ
ಪತಂಗಪತನವ ಕಂಡು
ಜ್ಞಾನಪಿಪಾಸು ದುಂಬಿಯಾದನು !
ನಡೆದುದವನಿಗದೆ ಬಂದು !

ಇಂತವನಾಯ್ದನು ಹಣತಿಯ ಬೆಳಕಿನ -
ಲರಿವಿನ ಬತ್ತದ ಕಾಳ ;
ಉತ್ತು ಬಿತ್ತಿ ಫಲವತ್ತುಗೈದನೆದೆ
ಬುದ್ಧಿ ಮನಸುಗಳ ಹಾಳ !

ಶಾರದ ಪ್ರಕಟನಾಲಯ, ಅರಳೇಪೇಟೆ, ಬೆಂಗಳೂರು-೨

# ಶಾರದಾ ಪ್ರಕಟನಾಲಯದ ಪ್ರಕಟನೆಗಳು

---

| | | ಬೆಲೆ | | |
|---|---|---|---|---|
| ೧. | ಕಾರವಾನ್ (ದ್ವಿತೀಯ ಮುದ್ರಣ) .. | ೧ | ೪ | ೦ |
| ೨. | ಸ್ವಾತಂತ್ರ್ಯದೆಡೆಗೆ (ದ್ವಿತೀಯ ಮುದ್ರಣ) | ೨ | ೪ | ೦ |
| ೩. | ಜೀವನ – ಕಲೆ * | ೧ | ೦ | ೦ |
| ೪. | ಮುಗುಳುನಗೆ * . | ೧ | ೪ | ೦ |
| ೫. | ಸ್ವಪ್ನಸುಂದರಿ (ದ್ವಿತೀಯ ಮುದ್ರಣ) .. . | ೧ | ೪ | ೦ |
| ೬. | ಆಲದ ಹೂ .. | ೧ | ೧೨ | ೦ |
| ೭. | ಹುಡುಗಾಟ .. | ೧ | ೪ | ೦ |
| ೮. | ಶವದ ಮನೆ ... | ೧ | ೪ | ೦ |
| ೯. | ಎದಿರೇಟು . | ೧ | ೮ | ೦ |
| ೧೦. | ಸರ್ವಮಂಗಳಾ (ದ್ವಿತೀಯ ಮುದ್ರಣ) . . | ೩ | ೮ | ೦ |
| ೧೧. | ಕೇಡಿಗನ ಕಿಡಿಗಳು | ೧ | ೦ | ೦ |
| ೧೨. | ದೇವತೆಗಳು ನಕ್ಕಾಗ | ೧ | ೪ | ೦ |
| ೧೩. | ಜ್ವಾಲಾಮುಖಿಯ ಮೇಲೆ . .. | ೪ | ೦ | ೦ |
| ೧೪. | ನನ್ನ ರಸಿಕ ಮತ್ತು ಬಂಗಾರದ ಗೆಜ್ಜೆ .. .. | ೧ | ೮ | ೦ |
| ೧೫. | ಹಾಳು – ಮೂಳು ... ... | ೧ | ೦ | ೦ |
| ೧೬. | ನಾಡಿಗೇರರ ನಗೆಬರಹಗಳು ೧ . ... | ೧ | ೪ | ೦ |
| ೧೭. | ಮೋಹದ ಬಲೆಯಲ್ಲಿ .. ... | ೫ | ೧೨ | ೦ |
| ೧೮. | ಸಾವಿನೊಂದಿಗೆ ಸರಸ .. | ೧ | ೪ | ೦ |
| ೧೯. | ಅನುರಾಗ .. . | ೧ | ೪ | ೦ |
| ೨೦. | ಬಿಡುಗಡೆಯ ಬೇಡಿ * . . | ೩ | ೪ | ೦ |
| ೨೧. | ಜೋಳದ ಬೆಳೆಯ ನಡುವೆ * .. .... | ೧ | ೪ | ೦ |
| ೨೨. | ಜರತಾರಿ ಜಗದ್ಗುರು (ದ್ವಿತೀಯ ಮುದ್ರಣ) ... | ೧ | ೮ | ೦ |
| ೨೩. | ಕಾನ್ವೆಂಟ್ ಗರ್ಲ್ * ... ... | ೧ | ೦ | ೦ |
| ೨೪. | ಖಾನಾವಳಿಯ ನೀಲಾ (ದ್ವಿತೀಯ ಮುದ್ರಣ) .. | ೧ | ೦ | ೦ |
| ೨೫. | ರಂಗನಾಯಕಿ .... .... | ೨ | ೦ | ೦ |

---

* ಪ್ರತಿಗಳು ಮುಗಿದಿವೆ

